# ದೇಶಾಂತರದ ಕಥೆಗಳು

ಸಂಗ್ರಾಹಕ

**ದೇವುಡು**

ಪ್ರಕಾಶಕರು

**ನಮ್ಮ ಪುಸ್ತಕ ಭಂಡಾರ**

ಬೆಂಗಳೂರು ಸಿಟಿ

ಸೋಲ್ ಏಜೆಂಟರು.

**ಎಸ್. ಎಸ್. ಎನ್. ಬುಕ್ ಡಿಪೋ**

ಬೆಂಗಳೂರು ಸಿಟಿ

1942

[ಬೆಲೆ ೧೨ ಆಣೆಗಳು

# ವಿಷಯಸೂಚಿಕೆ



---

# ಪೀಠಿಕೆ

ಇದೊಂದು ಸಂಗ್ರಹ ಹಲವು ತೋಟಗಳಿಂದ ಆಯ್ದು ತಂದ ಹೂವುಗಳ ಮಾಲೆ ಹೂವುಗಳೂ ಜಾತಿಜಾತಿಯವು, ಒಂದೇ ಜಾತಿಯಲ್ಲ. ಅದರಿಂದ ಅವುಗಳ ಬಣ್ಣವೂ ಪರಿಮಳವೂ ಒಂದೇ ರೀತಿಯದಲ್ಲ. ಈ ಗ್ರಂಥವನ್ನು ದೊಡ್ಡವರೂ ಓದಬಹುದು. ಆನಂದ ಪಡಬಹುದು. ಆದರೂ ಇದನ್ನು ಬರೆದಿರುವುದು 10-15 ವಯಸ್ಸಿನ ಹುಡುಗರಿಗಾಗಿ.

ಹಿಂದೆ ಬುದ್ಧಿಯ ಕಥೆಗಳನ್ನು ಬರೆದಾಗ ನಡೆದ ಸಂಗತಿಯನ್ನು ಇಲ್ಲಿ ನೆನೆಯಬೇಕಾಗಿದೆ. ಆ ಹದಿನಾಲ್ಕು ಕಥೆಗಳನ್ನು ಬರೆದಾಗ ನನಗೊಂದು ಯೋಚನೆ ಬಂತು. ಇವುಗಳನ್ನು ಬಾಲಕರಿಗಾಗಿ ಬರೆದಿದ್ದೇನೆ. ಅವರಿಗೆ ಇದು ಹಿಡಿಯುವುದೋ ಇಲ್ಲವೋ ಎನ್ನಿಸಿತು. ಅದಕ್ಕಾಗಿ ಪರೀಕ್ಷೆ ಮಾಡಿ ನೋಡಬೇಕೆಂದು ಆಗ ನಮ್ಮ ಮನೆಯ ಮಕ್ಕಳನ್ನೇ ಕೂರಿಸಿಕೊಂಡು ಅವರಿಗೆ ಹೇಳಿದೆ. ಒಂದು ಮಗುವಿಗೆ ಐದು ವರ್ಷ. ಇನ್ನೊಂದು ಮಗುವಿಗೆ ಮೂರುವರ್ಷ ಆ ಕಥೆಗಳನು ಓದುವಾಗ ಆ ಮಕ್ಕಳ ಮುಖಭಾವದಿಂದ, ಚೇಷ್ಟೆಗಳಿಂದ ಆ ಕಥೆಗಳು ಅವರ ಮನಸ್ಸಿಗೆ ಹಿಡಿಯಲಿಲ್ಲವೆಂದು ತೋರುವುದೋ ಅಲ್ಲಿ ಗುರುತು ಮಾಡಿಕೊಂಡು, ಆ ಭಾಗವನ್ನೋ, ಆ ವಾಕ್ಯವನ್ನೋ ಆ ಪದವನ್ನೋ ತಿದ್ದುತ್ತಾ, ಕೊನೆಗೆ ಹದಿನಾಲ್ಕು ಸಲ ಹೀಗೆ ಸಂಸ್ಕಾರ ಮಾಡಿ, ಆ ಕಥೆಗಳನ್ನು 1926 ರಲ್ಲಿ ಪ್ರಕಟಿಸಿದೆ ಅಂದಿನಿಂದ ಈಚೆಗೆ ಹಲವಾರು ಚಿಕ್ಕ ಮಕ್ಕಳ ಕಥೆಗಳನ್ನು ಬರೆಯುತ್ತಿದ್ದಾರೆ ಬರೆದಿದ್ದಾರೆ. ಈಗಲೂ ಈ ಸಂಗ್ರಹವನ್ನು ಹನ್ನೆರಡು ಹದಿಮೂರು ವರ್ಷದವರಿಗೆ ಅನೇಕರಿಗೆ ಓದಿ ಹೇಳಿದ್ದೇನೆ. ಓದಿಸಿದ್ದೇನೆ. ಆ ವಯಸ್ಸಿನವರು ಒಪ್ಪಿರುವರು ಎಂಬ ನಂಬಿಕೆ ಬಂದ ಮೇಲೆ ಇವುಗಳನ್ನು ಈಗ ಒಂದು ಪುಸ್ತಕವಾಗಿ ಹೊರಗೆ ಹಾಕಿದ್ದೇನೆ.

ಕುಮಾರ ಸಾಹಿತ್ಯವು ಎಂದರೆ 10 15 ವಯಸ್ಸಿನವರೆಗಿನ ಹುಡುಗರಿಗೆ ಬೇಕಾದ ಸಾಹಿತ್ಯವು ನಮ್ಮಲ್ಲಿ ಇಲ್ಲವೆನ್ನುವಷ್ಟು ಮಟ್ಟಿಗೆ ಆಗಿದೆ. ಈ ಲೋಪವು ಇಲ್ಲದಂತಾಗಲೆಂದು ನನ್ನ ಆಶೆ. ಬುದ್ಧಿಯ ಕಥೆಗಳು ಬಂದ ಮೇಲೆ ಆದಂತೆ ಈಗಲೂ ಕುಮಾರ ಸಾಹಿತ್ಯವು ಬೆಳೆಯಬೇಕೆಂಬ ಆಶೆಯಿಂದ ಈ ಸಂಗ್ರಹವನ್ನು ಪ್ರಕಟಿಸಲಾಗಿದೆ. ಈ ಕಾರ್ಯಕ್ಕಾಗಿ ನೆರವಾದ ಶ್ರೀ ಮಂಚಲದೊರೆ ರಾಮರಾಯರಿಗೆ ನಾನು ಕೃತಜ್ಞನಾಗಿದ್ದೇನೆ.

ಇನ್ನು ಈ ಕಥೆಗಳನ್ನು ಓದುವವರಿಗೊಂದು ಮಾತು. ಇಂತಹ ಕಥೆಗಳು, ನಮ್ಮ ದೇಶದಲ್ಲಿ ಅಪಾರವಾಗಿವೆ. ಅವು ಓದುಬರೆಹ ಬರದ ಹಿರಿಯರ ಬಾಯಲ್ಲಿ ಮಾತ್ರ ಇವೆ.

ನೀವು ದಯಮಾಡಿ ಅವುಗಳನ್ನು ಸಂಗ್ರಹಿಸಿ. ಅವನ್ನು ನಿಮ್ಮ ಹಿರಿಯರು, ಗುರುಗಳು, ಇವರ ಸಹಾಯದಿಂದ ನೀವೇ ಪ್ರಕಟಿಸಿದರೆ ಸಂತೋಷ. ಇಲ್ಲದಿದ್ದರೆ ನನಗೆ ಕಳುಹಿಸಿ. ಇಂಥವರ ಸಂಗ್ರಹದಿಂದ ಎಂದೇ ಅವುಗಳನ್ನು ಯಥೋಚಿತವಾಗಿ ಪ್ರಕಾಶ ಮಾಡೋಣ. ದಯವಿಟ್ಟು ಇದನ್ನು ಮರೆಯಬೇಡಿ. ನಿಮಗೆ ಸಂತೋಷವಾಗಲೆಂದು ಕಥೆಗಳನ್ನು ಸಂಗ್ರಹಿಸಿದ ಹಿರಿಯರ ಸಾಲ ನಿಮ್ಮ ಮೇಲಿದೆ. ಅದನ್ನು ನೀವು ತೀರಿಸುವುದು ಎರಡುರೂಪವಾಗಿ. ಒಂದು ಅವುಗಳನ್ನು ಓದಿ ಆನಂದಪಡುವುದು. ಇನ್ನೊಂದು ಅಂತಹ ಕಥೆಗಳು ಇನ್ನೆಲ್ಲಿದ್ದರೂ ಅವುಗಳನ್ನು ತಂದು ಓದುವವರಿಗೆ ಕೊಡುವುದು. ಈ ಎರಡೂ ಕಾರ್ಯವಾದರೆ ಈ ಪ್ರಕಟನೆಯ ಪೂರ್ಣಲಾಭವು ದೊರೆತಂತಾಯಿತು. ಅದು ಆದಷ್ಟು ಬೇಗ ಆಗಲಿ.

ದೇವುಡು.

---

ಹಿಂದಿಸಿಂದ.—ಕಥೆಯೊಂದೊಂದಕ್ಕೂ ಒಂದೊಂದು ಚಿತ್ರವನ್ನು ಹಾಕಬೇಕೆಂಬ ಆಸೆಯು ಈಗಿನ ಪರಿಸ್ಥಿತಿಯಲ್ಲಿ ಸಾಧ್ಯವಾಗಲಿಲ್ಲ ಆದಕ್ಕಾಗಿ ದಯವಿಟ್ಟು ಮನ್ನಿಸುವುದು.

# ಬಲಿದಾನ

ಮಳೆ ಆಗಿ ಎಷ್ಟೋ ತಿಂಗಳಾಗಿ ಹೋಗಿತ್ತು. ನೆಲವೆಲ್ಲ ಒಣಗಿ ಬೆಂಡೆದ್ದು ಬಿರುಕು ಬಿಟ್ಟು ಹೋಗಿತ್ತು. ಭಾವಿಗಳಲ್ಲೂ ನೀರಿಲ್ಲ, ಹಳ್ಳ ಕೊಳ್ಳಗಳಲ್ಲಂತೂ ಇಲ್ಲವೇ ಇಲ್ಲ. ಒಂದು ಗರಿ ಹುಲ್ಲು ಸಿಕ್ಕೀತೇ ಎಂದು ದನಗಳು ಬೆಳಗಿಂದ ಸಂಜೆಯುವರೆಗೂ ಅಲೆದಲೆದು ಮೂಳೆ ಚಕ್ಕಳ ಆಗಿದ್ದುವು. ಅವನ್ನು ನೋಡಿ ಅತ್ತೂ ಅತ್ತೂ ದನಕಾಯುವ ಹುಡುಗರ ಕಣ್ಣುಗಳು ಊದಿಹೋಗಿದ್ದುವು.

ದಿನ ದಿನವೂ ಎಲ್ಲರೂ ಆಕಾಶನೋಡುವರು. ನೀಲಿಯ ಆಕಾಶವು ಎಲ್ಲೆಲ್ಲೂ ತಾನೆ ತಾನಾಗಿ ಕಾಣುವುದು. ಕರಿಯ ಮೋಡವಿರಲಿ, ಬಿಳಿಯ ಮೋಡದ ಚೂರೂ ಕಾಣಿಸದು. ದಿಕ್ಕು ವಿದಿಕ್ಕುಗಳಿಂದೆಲ್ಲ ಆವಿಗೆಯಿಂದ ಬರುವಹಾಗೆ ಕಾದ ಗಾಳಿಯು ಬೀಸುವುದು. ಎಲ್ಲೆಲ್ಲಿ ಹುಡುಕಿದರೂ ತುಟಿ ಒದ್ದೆಯಾಗುವಷ್ಟೂ ನೀರು ಇಲ್ಲ.

ಜನರಿಗೆ ಸುಖಸಂತೋಷ ಎನ್ನುವುದರ ಹೆಸರೂ ಮರೆಯಿತು; ಯಾರನ್ನು ಕಂಡರೂ, ಆಕಾಶದ ಕಡೆ ನೋಡಿ ನಿಟ್ಟುಸಿರು ಬಿಟ್ಟು ತಲೆ ಬಗ್ಗಿಸಿಕೊಂಡು ಸಪ್ಪೆ ಮೋರೆಹಾಕಿಕೊಂಡು ಹೊರಟುಹೋಗುವರು. ಹುಡುಗರೂ ಮಕ್ಕಳೂ ಕೂಡ ಬಿಸಿಲಲ್ಲಿ ಬಾಡಿದ ಹೂಗಳಂತಾಗಿದ್ದರು.

ಕುಡಿಯುವುದಕ್ಕೆ ನೀರಿಲ್ಲದ ಮೇಲೆ ಊರಿನಲ್ಲಿ ಇನ್ನೇನು ತಾನೇ ಇದ್ದೀತು? ಸಂಜೆಯಾದರೆ, ಎಲ್ಲವೂ ಶಾಂತವಾಗಿ ನಿಶ್ಶಬ್ದವಾಗುವುದು. ತಾಯಿಯರ ಬಳಿ ಮೊಲೆಕುಡಿಯಲು ಹೋಗಿ, ಹಾಲು ಸಿಕ್ಕಲಿಲ್ಲವೆಂದು ಅಳುವ ಮಕ್ಕಳ ಅಳುವಿನ ದನಿ ಅಷ್ಟು ಹೊತ್ತು ಆ ನಿಶ್ಶಬ್ದವನ್ನು ಭೇದಿಸುವುದು. ಅದೂ ಅಷ್ಟು ಹೊತ್ತೇ! ಮತ್ತೆ ಅದೂ ಶಾಂತವಾಗಿ ಎಲ್ಲವೂ ಮೌನವಾಗುವುದು.

ಇಂತಹ ಭಯಂಕರವಾದ ಮೌನವನ್ನು ವಹಿಸಿದ ಪ್ರಕೃತಿಗಿಂತಲೂ ತೀವ್ರವಾದ ಮೌನವನ್ನು ಅವಲಂಬಿಸಿ ರಾಸೆ ಕೆ ಪೆ ಗ್‌ಸು ಊರಬಾಗಿಲಲ್ಲಿ ಕುಳಿತಿದ್ದನು. "ಅರಸಾಗಿ ನನ್ನ ಪ್ರಜೆಗಳ ದುಃಖವನ್ನು ನಿವಾರಿಸಲು ಅಶಕ್ತನಾದೆನಲ್ಲ!" ಎಂಬ ಚಿಂತೆಯು ಆತನ ಹೃದಯವನ್ನು ಕೊರೆಯುತ್ತಿತ್ತು.

ದಿನದಿನವೂ ಅರಸನ ಪುರೋಹಿತನು ಬೆಟ್ಟದ ಮೇಲಕ್ಕೆ ಹೋಗಿ ತನ್ನ ಮಂತ್ರಶಕ್ತಿಯನ್ನೆಲ್ಲ ಪ್ರಯೋಗಿಸಿ ಮಳೆಯ ದೇವರನ್ನು ಕರೆಯುತ್ತಾ ಸಂಜೆಯವರೆಗೂ ಬಿಸಿಲಲ್ಲಿ ಬೇಯುತ್ತ ನಿಂತಿರುವನು. ಅರಸನು ಬೆಟ್ಟದ ಬುಡದಲ್ಲಿ ಮಳೆ ಬಂದೀತೆ! ಮಂದಿ ಉಳಿದಾರೆ! ಎಂದು ಜಪಮಾಡುತ್ತಾ ನಿಂತಿರುವನು. ದಿನವೂ ಸಂಜೆಯಾಗುತ್ತಲೂ ಪುರೋಹಿತನು ಬೆಟ್ಟ ಇಳಿಯುವನು. ಅರಸನೂ ಅವನ ಹಿಂದೆ ಹೊರಡುವನು. ಇಬ್ಬರೂ ಮೌನವಾಗಿ ಊರಿಗೆ ಹಿಂತಿರುಗುವರು.

ತಮ್ಮ ಪ್ರಯತ್ನಗಳು ಯಾವುದೂ ನಡೆಯಲಿಲ್ಲವೆಂಬುದು ಅರಸನಿಗೆ ಮಂದಟ್ಟಾಯಿತು. ನೀರು ಇರುವ ಎಡೆಯನ್ನು ಹುಡುಕಿಕೊಂಡು ವಲಸೆ ಹೋಗಬೇಕು, ಅಥವಾ ಇದ್ದಲ್ಲಿಯೇ ಇದ್ದು ಪ್ರಾಣವನ್ನು ಬಿಡಬೇಕು. ಏನು ಮಾಡುವುದು ಎಂದು ಅರಸನು ಅಷ್ಟು ತೀವ್ರವಾಗಿ ಯೋಚಿಸುತ್ತಿದ್ದುದು.

"ಎಲಾ! ನೋಡಿದೆಯಾ! ಮಳೆಯ ದೇವರು ಬುಲೀಸನು ಏನು ಮಾಡಿದರೂ ಒಲಿಯಲಿಲ್ಲ. ಇನ್ನು ಇಲ್ಲಿಯೇ ಇದ್ದು ಫಲವಿಲ್ಲ. ಎಲ್ಲಿಯಾದರೂ ನೀರು ಸಮೃದ್ಧಿಯಾಗಿರುವ ದೇಶವನ್ನು ಹುಡುಕಿಕೊಂಡು ಬಾ ಎಂದು ನಮ್ಮ ಹುಡುಗ ಮೊಫಾಫೋನನ್ನು ಕಳುಹಿಸಬೇಕು. ಯತ್ನವಿಲ್ಲ" ಎಂದು ನಿಶ್ಚಯಿಸಿದನು. ಮರುಗಳಿಗೆಯಲ್ಲಿಯೇ ಯುವರಾಜನನ್ನು ಕರೆಸಿ ಅಪ್ಪಣೆಮಾಡಿದುದೂ ಆಯಿತು.

ಮೊಫಾಫೋ ಮರುದಿನ ಬೆಳಗಾಗುತ್ತಿದ್ದ ಹಾಗೆಯೇ ತನ್ನ ಸಮವಯಸ್ಕರು ಕೆಲವರನ್ನು ಕರೆದುಕೊಂಡು ಹೊರಟನು "ತುಂಬಿ ಹರಿಯುವ

ಹೊಳೆಗಳು, ತುಂಬಿತುಳುಕುವ ಕೆರೆಕಟ್ಟೆಗಳು ಇರುವ ಭಾಗ್ಯವಂತ ದೇಶವನ್ನು ನೋಡಿಕೊಂಡು ಬಾ " ಎಂದು ತಂದೆಯ ಅಪ್ಪಣೆಯಾಗಿತ್ತು. ಅದರಂತೆಯೇ ಹುಡುಕಿದನು.

ಬೆಳಗಿಂದ ಸಂಜೆಯವರೆಗೂ ಹುಡುಕಿ ಹುಡುಕಿ ಅಲೆದನು. ಕೊನೆಗೆ ಇನ್ನೇನು ಸೂರ್ಯನು ಅಸ್ತಮಯವಾಗುವನು ಎಂಬ ವೇಳೆಗೆ ದಿಗಂತದ ಕೊನೆಯಲ್ಲಿ ಎಲ್ಲಿಯೋ ನೀರು ಪಳಪಳ ಎಂದಂತಾಯಿತು. ಅವನ ಜೊತೆಯವರೆಲ್ಲರೂ ಆಯಾಸದಿಂದ ಬಳಲಿಹೋಗಿದ್ದರು. ಅವರನ್ನು ಅಲ್ಲಿಯೇ ಬಿಟ್ಟು ಸೋತುಹೋದ ಕಾಲುಗಳನ್ನು ಎಳೆದು ಹಾಕುತ್ತ ಆದಷ್ಟು ಬೇಗ ಅಲ್ಲಿಗೆ ಹೋದನು. ಕೊಳ. ತಿಳಿನೀರು ತುಂಬಿದೆ.

ಯುವರಾಜನಿಗೆ ಹೋಗಿದ್ದ ಪ್ರಾಣ ಮರಳಿ ಬಂದಂತಾಯಿತು. ಆಶೆಯಿಂದ ಒಂದು ಬೊಗಸೆ ನೀರು ಎತ್ತಿದನು. ಆದರೆ ಆ ಬೊಗಸೆಯು ಬಾಯಿ ಹತ್ತಿರಕ್ಕೆ ಬರುವುದರೊಳಗಾಗಿ ಯಾರೋ ಕಣ್ಣಿಗೆ ಕಾಣಿಸದವರು ಕೈಮೇಲೆ ಹೊಡೆದರು; ನೀರು ಚೆಲ್ಲಿ ಹೋಯಿತು. ಮತ್ತೊಂದು ಸಲವೂ ಹೀಗೆಯೇ ಆಯಿತು.

ಮೊಘಾಫ್ಪೋಗೆ ಆಶ್ಚರ್ಯವಾಯಿತು: " ನೀರಿನೊಡೆಯಾ! ಈ ಕೊಳದಲ್ಲಿ ನೀರು ಕುಡಿದು ಬಾಯಾರಿಕೆಯನ್ನು ಕಳೆದುಕೊಳ್ಳಬಾರದೆ? ಇದೇಕೆ ಹೀಗೆ ಮಾಡುತ್ತಿದ್ದೀಯೆ?" ಎಂದು ಭಕ್ತಿಯಿಂದ ಕೇಳಿಕೊಂಡನು.

ಜಲಾಧಿಪತಿಯಾದ ಬುಲೇನನು ಅದೃಶ್ಯನಾಗಿಯೇ ಇದ್ದು ಉತ್ತರ ಹೇಳಿದನು: " ನಿಮ್ಮ ತಂದೆಗೆ ಹೇಳು. ರಾಜಪುತ್ರಿ ನ್ಗಕ್ಗಪೆಗ'ಳನ್ನು ಕಳುಹಿಸಿಕೊಟ್ಟರೆ ಸರಿ. ಇಲ್ಲವಾದರೆ ಕುಡಿಯುವುದಕ್ಕೆ ಒಂದು ತೊಟ್ಟು ನೀರಿಲ್ಲದೇ ಹೋಗುವುದು; ಜನರೂ ದನಕರುಗಳೂ ಎಲ್ಲರೂ ಧ್ವಂಸವಾಗಿ ಹೋಗುವರು " ಎಂದು ಅಬ್ಬರಿಸಿದನು.

ತಂಗಿಯೆಂದರೆ ಮೊಘಾಫ್ಪೋಗೆ ಪಂಚಪ್ರಾಣ. ಅಂಥ ತಂಗಿಯನ್ನು

ಕಳುಹಿಸಬೇಕೆಂದು ತಂದೆಯೊಡನೆ ಯಾವ ಮೊಕದಿಂದ ಹೇಳಬೇಕು ? ಅಲ್ಲ, ತಂದೆಯೂ ಕೂಡ ಮಗಳನ್ನು ಎಷ್ಟು ಪ್ರೀತಿಸುವನು ಎಂಬುದೂ ಅವನಿಗೆ ಗೊತ್ತು. ಆದರೂ ದೇವರ ಅಪ್ಪಣೆ! ಯತ್ನವಿಲ್ಲದೆ "ದೇವಾ! ನಿನ್ನ ಅಪ್ಪಣೆಯನ್ನು ನಾನೇನೋ ನೆರವೇರಿಸುವೆನು. ಆದರೆ ನಮ್ಮ ತಂದೆಯು ತನ್ನ ಪ್ರೀತಿಯ ಮಗಳನ್ನು ಒಪ್ಪಿಸುವನೋ, ದೇಶದ ಜನರನ್ನೆಲ್ಲ ಬಲಿ ಗೊಡುವನೋ, ನಾನು ಹೇಳಲಾರೆ. ನನಗೆ ತಿಳಿದಮಟ್ಟಿಗೂ ನಮ್ಮ ತಂದೆಯೂ ಪ್ರಪಂಚವನ್ನೇ ಬೇಕಾದರೂ ಕೊಟ್ಟಾನು, ಮಗಳನ್ನು ಕೊಡಲಾರ. ಆಗಲಿ, ನಿನ್ನ ಅಪ್ಪಣೆ" ಎಂದು ಕೈಮುಗಿದು ಚಿಂತಾಭಾರದಿಂದ ಕುಗ್ಗುತ್ತ ಹಿಂತಿರುಗಿದನು.

ಅರಸನು ಮಗನ ಹಾದಿಯನ್ನೇ ಕಾಯುತ್ತಿದ್ದನು. ಊರಿನ ಯಜ ಮಾನರೂ ಅರಸನ ಜೊತೆಯಲ್ಲಿಯೇ ಇದ್ದರು. ಅರಸನು ಮಗನು ತಂದ ದೇವರ ಅಪ್ಪಣೆಯನ್ನು ಕೇಳಿದನು. ಆತನಿಗೆ ನಾಲಗೆಯು ಆಡದೆಹೋಯಿತು. ಇತರರು "ನಾಡಿಗೆ ನಾಡೇ ಮಳೆಯಿಲ್ಲದೆ ಕಂಗೆಟ್ಟಿದೆ. ರಾಜಪುತ್ರಿಯನ್ನು ಕರೆಸಿ; ಆಕೆಯೇ ಇತ್ಯರ್ಥ ಮಾಡಲಿ" ಎಂದರು.

ರಾಜಪುತ್ರಿಯು ಬಂದಳು: "ಅಪ್ಪಾ! ನನ್ನನ್ನು ಕಳುಹಿಸಿಕೊಡು, ನಮ್ಮ ಪ್ರಜೆಗಳು ಬದುಕಲಿ. ನಾನು ಬುಲೇನನ ಬಳಿಗೆ ಹೋಗುತ್ತೇನೆ" ಎಂದಳು. ಅರಸನು ಯತ್ನವಿಲ್ಲದೆ ಒಪ್ಪಿದನು.

ಮರುದಿನ ಬೆಳಿಗ್ಗೆ ಬೆಟ್ಟದ ಗಾಳಿಯು ಬೀಸುವ ಹೊತ್ತಿಗೆ, ಇನ್ನೂ ಸೂರ್ಯನ ಕಿರಣವು ಭೂಮಿಯನ್ನು ಮುಟ್ಟುವವೇಳೆಗಾಗಲೇ, ಮಫಾ ಫೋನು ತಂಗಿಯನ್ನು ಕರೆದುಕೊಂಡು ಹೊರಟನು. ಮದುಮಗಳ ಜೊತೆ ಯಲ್ಲಿ ಹೋಗುವ ದಿಬ್ಬಣದಂತೆ ಊರಿನ ಹರೆಯದ ಗಂಡು ಹೆಣ್ಣು ಎಲ್ಲಾ ಹಿಂದೆಯೇ ಹೊರಟಿತು. ತಾಯಿಯು "ಮಗಳೇ! ಮತ್ತೆ ನಿನ್ನನ್ನು ನೋಡು ವೆನೋ ಇಲ್ಲವೋ" ಎಂದು ಕಣ್ಣೀರಿಟ್ಟುಕೊಂಡಳು. ತಂದೆಯು "ಮಗಳೇ! ಸುಖವಾಗಿರು. ಬೆಳಗಿನ ಸೂರ್ಯನಹಾಗೆ ನಿನ್ನ ಮುಖವು ಯಾವಾಗಲೂ

ಕಂಗೊಳಿಸುತ್ತಿರಲಿ" ಎಂದು ಹರಸಿದನು. ರಾಜಪುತ್ರಿಯು ಮಾತ್ರ ಕಣ್ಣೀರು ಕರೆಯಲಿಲ್ಲ. ಅವಳಿಗೆ ಏನೋ ಸಮಾಧಾನ.

ಎಲ್ಲರೂ ರಾಜಪುತ್ರಿಯನ್ನು ಕರೆದುಕೊಂಡು ಬುಲೇಸನು ರಾಜಪುತ್ರ ನೊಡನೆ ಮಾತನಾಡಿದ್ದ ಕೊಳದ ಬಳಿಗೆ ಬಂದರು. ಅಲ್ಲಿ ಆಕೆಯನ್ನು ಒಬ್ಬ ಳನ್ನೇ ಬಿಟ್ಟು ಎಲ್ಲರೂ ಹಿಂತಿರುಗಿದರು. ಯಾರಿಗೂ ಹಿಂತಿರುಗುವದು ಬೇಡ, ಆದರೂ ಹೋದರು.

ಇತ್ತ ಸೂರ್ಯನು ಮುಳುಗಿದನು. ಚಿನ್ನದ ಕಿರಣಗಳು ತಾಮ್ರದ ಕಿರಣಗಳಾಗಿ, ಅವೂ ಹೋಗಿ ನಸುಕಾಗಿ, ಕೊನೆಗೆ ಕತ್ತಲಿನ ಒಡೆತನವು ಬಂತು. ಹಗಲಿನ ತೀವ್ರತೆಯು ಹೋಗಿ ರಾತ್ರಿಯ ತಂಪು ಮೂಡಿತು. ಆಕಾಶದಲ್ಲಿ ತಾರೆಗಳು ತಲೆಯಿಟ್ಟು ಇಣಿಕಿ ನೋಡಿ ಒಂದೊಂದಾಗಿ ರಂಗಕ್ಕಿಳಿದುವು. ಬೆಟ್ಟಗಳ ಹಿಂದೆ ಅವಿತಿದ್ದ ಚಂದ್ರನು ಮೆತ್ತಮೆತ್ತಗೆ ತಲೆಯೆತ್ತಿದನು.

ಸೆಕ್ರೆಪೆಗಳಿಗೆ ಬೆಳಗಿಂದ ಸಂಜೆಯವರೆಗೆ ನಡೆದು ಆಯಾಸ ಬಹಳ ವಾಗಿತ್ತು. ಭೂಮಿಗೆ ತಲೆಯಿಟ್ಟು ಮಲಗೇನೆ ಎನ್ನಿಸುತ್ತಿತ್ತು. ಅವಳಿಗೆ ಏನೋ ಎಂತೋ ದಿಗಿಲಾಗಲಿಲ್ಲ. "ದೇವರಿಗೆ ಬಿಡಾಸಲಾಗಿ ಬಂದವಳು ನಾನು, ನನಗೇನು ದಿಗಿಲು?" ಎಂದುಕೊಂಡಳು. ಆದರೆ ನಿದ್ದೆಯನ್ನು ಮಾತ್ರ ತಡೆಯಲು ಆಗಲಿಲ್ಲ. ಹಾಗೆಂದು ಎಲ್ಲಿ ಮಲಗಬೇಕು? ಅಥವಾ ಯಾರನ್ನು ಕೇಳಬೇಕು?

ಕೊನೆಗೆ ಧೈರ್ಯಮಾಡಿ ಬುಲೇಸನನ್ನೇ ಕೇಳುವುದು ಎಂದು ಕೊಂಡಳು. "ಸ್ವಾಮಿ! ನಾನು ಎಲ್ಲಿ ಮಲಗುವುದು?" ಎಂದಳು. ಉತ್ತರಬಂದಿತು. "ಇಲ್ಲಿಯೇ! ಇಲ್ಲೇ ಮಲಗು" ಎಂದಿತು ಒಂದು ಗಂಭೀರ ಧ್ವನಿ. ಅರಸು ಮಗಳು ತಾನು ಹೊದ್ದಿದ್ದ ಮೃದುವಾದ ಚರ್ಮವನ್ನು ಹಾಸಿಕೊಂಡು ಅಲ್ಲಿಯೇ ಮಲಗಿದಳು.

ಅವಳಿಗೆ ಎಚ್ಚರವಾಗುವ ವೇಳೆಗೆ ಮಳೆಯು ಕರೆಯುತ್ತಿತ್ತು. ನೆಲವು

ಹೊಸಮಳೆಯಲ್ಲಿ ನೆಂದು ಕಮ್ಮನೆಯ ಕಂಪು ಎಲ್ಲೆಲ್ಲೂ ಹರಡಿ ಎಲ್ಲರ ಮೂಗನ್ನೂ ಮನವನ್ನೂ ಅರಳಿಸುತ್ತಿತ್ತು. ಅವಳಿಗೂ ಸಂತೋಷವಾಯಿತು. "ಕೆಟ್ಟರೆ ನಾನೊಬ್ಬಳು ಕೆಟ್ಟೆ ! ನಮ್ಮವರೆಲ್ಲ ಬದುಕಿದರು" ಎಂದುಕೊಂಡು ಕಣ್ಣುಬಿಟ್ಟಳು. ಆಕಾಶದಲ್ಲೆಲ್ಲಾ ಕರಿಯ ಮೋಡಗಳು ತುಂಬಿ ತಾರೆಗಳನ್ನೂ ಚಂದ್ರನನ್ನೂ ಮುಚ್ಚಿಬಿಟ್ಟಿದ್ದವು. ಗಾಳಿಯ ಬಿಸಿಯಾರಿ ತಂಪೇರಿ ಚಳಿಯಾಗಹತ್ತಿತು.

ಸೇಕೇಷೇಗಳು ಎದ್ದಳು. "ಮಳೆ ಬೀಳುತ್ತಿದೆ, ಎಲ್ಲಿ ಮಲಗಲಿ ?" ಎಂದು ಕೇಳಿದಳು. ಮತ್ತೆ ಅದೇ ದನಿಯೇ "ಇಲ್ಲಿಯೇ ! ಇಲ್ಲೇ !" ಎಂದಿತು. ಅವಳೂ ಮರುಮಾತಾಡದೆ ಚರ್ಮವನ್ನೇ ಹೊದೆದುಕೊಂಡು ಮತ್ತೆ ಅಲ್ಲಿಯೇ ಮಲಗಿದಳು.

ಅವಳಿಗೆ ಮತ್ತೆ ಎಚ್ಚರವಾದಾಗ ಅವಳು ಒಂದು ಭಾರಿಯ ಗುಡಿಸಲಿನಲ್ಲಿ ಮಲಗಿದ್ದಳು. ಅವಳು ಅರಸುಮಗಳು. ಆದರೂ ಅಷ್ಟು ಸೊಗಸಾದ ಗುಡಿಸಿಲನ್ನು ಅವಳು ನೋಡಿಯೇ ಇರಲಿಲ್ಲ. ಸುತ್ತಲೂ ಮೆತ್ತಗೆ ಹಸನಾಗಿ ಹದಮಾಡಿದ ಚರ್ಮಗಳನ್ನು ರಾಶಿರಾಶಿಯಾಗಿ ಅಡಕಿದೆ. ಗೋಡೆಗೋಡೆಯ ಮೇಲೂ ಗುರಾಣಿಗಳೂ ಆಯುಧಗಳೂ ಓರಣವಾಗಿ ಇಟ್ಟಿವೆ. ಅವಳು ಮಲಗಿದ್ದ ಹಾಸುಗೆಯ ಮಗ್ಗುಲಲ್ಲಿ ಹದವಾಗಿ ರುಚಿಯಾಗಿ ಬೇಯಿಸಿದ ಮಾಂಸದ ಭೋಜನವೂ ಗಮ್ಮೆಂದು ವಾಸನೆಯಿಂದಲೇ ತನ್ನ ರುಚಿಯನ್ನು ತೋರಿಸುವ ಪಾನಕವೂ ಸಿದ್ಧವಾಗಿವೆ. ಆದರೂ ಸುತ್ತಮುತ್ತಲೂ ಮಾನವರ ಸುಳಿವೂ ಇಲ್ಲ.

ಮಳೆಯು ಇನ್ನೂ ಬೀಳುತ್ತಲೇ ಇತ್ತು. ಹೊರಗೆ ತಲೆಯಿಟ್ಟು ನೋಡಿದಳು. ಎಲ್ಲೆಲ್ಲೂ ನೀರು ಹರಿಯುತ್ತ ರಾತ್ರಿಯೆಲ್ಲವೂ ಮಳೆಯಾಯಿತು ಎಂದು ನೆಲವೇ ಹೇಳುತ್ತಿದೆಯೋ ಎಂಬಂತೆ ಮೊರೆಯುತ್ತಿತ್ತು. "ನೆಲವು ಚೆನ್ನಾಗಿ ನೆನೆದಿದೆ. ಕೆರೆಕಟ್ಟೆಗಳಿಗೆಲ್ಲ ನೀರು ಬಂದಿದೆ, ಚಿಂತೆಯಿಲ್ಲ,

ದೇಶವೇ ಬದುಕಿತು. ದನಕರುಗಳೂ ಜನಗಳೂ ಬದುಕಿದರು" ಎಂದು ರಾಜ ಪುತ್ರಿಯು ಸಂತೋಷಪಟ್ಟುಕೊಂಡಳು.

ದಿನಗಳು ಕಳೆಯಿತು. ನೆಲತಾಯಿಯು ಮತ್ತೆ ಹಸುರುಡೆಯುಟ್ಟು ಕಳಕಳಿಸಿದಳು. ಹೊಟ್ಟೆಗಿಲ್ಲದೆ ಮೂಳೆ ಚಕ್ಕಳವಾಗಿದ್ದ ದನಕರುಗಳು ಮತ್ತೆ ಮೈತುಂಬಿ ಗುಂಡುಗುಂಡಾದುವು. ಸೇಕೇಪೇಗಳು ಏಕಾಂಗಿಯಾದರೂ ಯಾವ ಭೀತಿಯೂ ಇಲ್ಲದೆ ರಾಜಯೋಗ್ಯವಾದ ಆ ಗುಡಾರದಲ್ಲಿ ಸುಖ ವಾಗಿದ್ದಳು. ಹೊತ್ತಿಗೆ ಸರಿಯಾಗಿ ಊಟವು ಬರುವುದು. ರಾತ್ರಿಯವೇಳೆ ಗಂಡನು ಬರುವನು. ಬೆಳಗಾಗುವ ವೇಳೆಗೆ ಅವನು ಹೊರಟುಹೋಗು ವನು. ಅವನ ಮುಖವನ್ನು ಅವಳು ನೋಡಿಲ್ಲ. ಅವಳಿಗೆ ಗಂಡನ ಗುರು ತಿರುವುದು ದನಿಯಿಂದ.

ಹೀಗೆಯೇ ವರುಷವು ತುಂಬಿತು ಎನ್ನುವುದರೊಳಗಾಗಿ ಸೇಕೇ ಪೇಗಳು ಪುತ್ರವತಿಯಾದಳು. ಮಗುವು ಮಿಕ್ಕ ಮಕ್ಕಳಿಗಿಂತ ಸುಂದರ ವಾಗಿ, ಚೆನ್ನಾಗಿ ಬೆಳೆದು, ದೇವಕುಮಾರನಂತಿತ್ತು. ಅವಳ ಏಕಾಂತ ವಾಸವು ಮುಗಿಯಿತು. ಅವಳ ಜೊತೆಗೆ ಅವಳ ಮಗನೊಬ್ಬನಾದನು. ಯಾವಾಗ ನೋಡಿದರೂ ತಾಯಿಮಕ್ಕಳು ಆಟವಾಡುತ್ತಿರುವರು. ಮಗು ವಿನ ಕೇಕೆಯ ದನಿ ಗುಡಿಸಲನ್ನು ತುಂಬುವುದು. ಮತ್ತೊಂದು ಗಳಿಗೆಗೆ ಆನಂದದಿಂದ ತುಂಬಿರುವ ತಾಯಿಯ ಹೃದಯದ ಆನಂದವೇ ಜೋಗುಳ ವಾಗಿ ಹೊರಹರಿದು ಗುಡಿಸಲನ್ನು ತುಂಬುವುದು. ಹೀಗೆ ತಾಯಿಮಕ್ಕಳು ಗುರುತರಿಯದ ಯಜಮಾನನ ಗುಡಿಸಲಿನಲ್ಲಿ ಉಪವನದ ಲತೆಗಳಂತೆ ಸುಖ ವಾಗಿ ಬೆಳೆದರು.

ಅರಸುಮಗಳಿಗೆ ತಂದೆತಾಯಿಗಳ ಹಂಬಲವು ಹುಟ್ಟಿತು; "ಅವರಿಗೂ ತನ್ನ ಮುದ್ದಿನ ಕಂದನನ್ನು ತೋರಿಸಬೇಕು. ದೇವರಿಗೆಂದು ಕೊಟ್ಟ ಮಗಳು ಬದುಕಿದ್ದಾಳೆ. ಮಗನನ್ನೆತ್ತಿಕೊಂಡು ಸುಖವಾಗಿ ಬಾಳುತ್ತಿ ದ್ದಾಳೆ, ಎಂದು ತಿಳಿದರೆ ಅವರೆಷ್ಟು ಆನಂದಪಟ್ಟಾರು!" ಎನ್ನಿಸಿತು. ಬರು

ಬರುತ್ತ ಆಸೆಯು ಬಲಿಯಿತು. ಗಂಡನ ಅಪ್ಪಣೆ ಪಡೆದು ತವರುಮನೆಗೆ ಹೊರಟಳು.

ಇತ್ತ ತವರೂರಿನವರು ಬೆಳೆ ಬೆಳೆದು ದನ ಕರೆದು ಸುಖವಾಗಿದ್ದರು. ಬಂದ ಮಗಳನ್ನು ಕಂಡು ಅರಸನೂ ಅರಸಿತಿಯೂ ಆನಂದದಿಂದ ಕಂಬನಿಯ ಮಳೆಗರೆದರು. ದೇವರಿಗೆಂದು ಬಿಟ್ಟ ಮಗಳು ಕಣ್ಮರೆಯಾಗಿ ಲೋಕಾಂತರವನ್ನು ಸೇರಿದಳು ಎಂದು ಕಾತರಿಸಿ, ಸೊರಗಿದ್ದ ತಾಯಿಯ ಮನಸ್ಸು ಮಗನನ್ನೆತ್ತಿಕೊಂಡು ಒಲಿಯುತ್ತ ನಲಿಯುತ್ತ ಬಂದ ಮಗಳನ್ನು ಕಂಡು ಸಂತೋಷದಿಂದ ಪಲ್ಲವಿಸಿ ಬೆಳೆದ ಮರದಂತಾಯಿತು. ತಂದೆಯು ಮಗಳನ್ನೂ ಮೊಮ್ಮಗನನ್ನೂ ಕಂಡು ಸಂತೋಷದಿಂದ ಕುಣಿದು ಕುಪ್ಪಳಿಸಿ ನಿತ್ಯಸಮಾರಾಧನೆಯನ್ನು ಮಾಡಿದನು.

ಕೊನೆಗೆ ತವರುಬಿಟ್ಟು ಗಂಡನ ಮನೆಗೆ ಹೊರಡುವ ಕಾಲವು ಬಂತು. ಅಳಿಯನ ಸುದ್ದಿಯನ್ನೇ ಅರಿಯದಿದ್ದರೂ ಮಗಳು ಸುಖವಾಗಿರುವಳಲ್ಲ ಎಂಬ ಸಂತೋಷದಲ್ಲಿ ತಂದೆತಾಯಿಗಳು ಮುದ್ದಿನ ಮಗಳನ್ನು ಬೀಳ್ಕೊಟ್ಟರು. ಅರಸುಮಗಳು ಜೊತೆಗಿರಲೆಂದು ತನ್ನ ಕೊನೆಯ ತಂಗಿಯನ್ನು ಜೊತೆಯಲ್ಲಿ ಕರೆದುಕೊಂಡು ಹೊರಟಳು.

ತಂಗಿಯು ಬಂದದ್ದೇ ಅವಳ ಮನೆಯಲ್ಲಿ ಅವಾಂತರಕ್ಕಾರಂಭವಾಯಿತು. ಆ ಹುಡುಗಿಗೆ ಅಕ್ಕನ ಮಗನ ಆಟಗಳು ಸರಿಬೀಳಲಿಲ್ಲ. ಅವನು ಆಟವೆಂದು ಆಡಿದುದೆಲ್ಲ ಅವಳಿಗೆ ಕಾಟವಾಗಿ ತೋರಿ ಸಹಿಸುವುದಕ್ಕೆ ಕಷ್ಟವಾಯಿತು. ಕೆಲವು ದಿನ ಬಂದ ಕೋಪವನ್ನು ನುಂಗುತ್ತಿದ್ದಳು. ಬರುಬರುತ್ತ ಅದು ಅಸಾಧ್ಯವಾಗಿ, ಕೋಪವು ಪ್ರಕಟವಾಗಿ ಆ ಮಗುವನ್ನು ಹೊಡೆದು ಬಯ್ಯುವಷ್ಟು ಆಯಿತು.

ಹೀಗೆ ಒಂದು ದಿನ ಅವಳು ತನ್ನ ರೇಗಿನಲ್ಲಿ "ಹೋಗು ಮುಕ್ಕ! ಹುಟ್ಟಿಸಿದವನ ಮೊಕ ಕಾಣದಿದ್ದರೂ ನಿನ್ನ ಕಾಟ ಮಾತ್ರ ತಡೆಯೋಕೆ ಆಗದು" ಎಂದು ನಿಷ್ಠುರವಾಗಿ ಬಯ್ದಳು. ಮಗುವು ಸಪ್ಪೆಮೊಕ ಮಾಡಿ

ಕೊಂಡು ಅತ್ತುಕೊಂಡು ಹೊರಕ್ಕೆ ಹೋಯಿತು. ಅದನ್ನು ಸಮುದಾಯಿಸಲು ತಾಯಿಯು ಮನೆಯಲ್ಲಿ ಇರಲಿಲ್ಲ.

ಮಕ್ಕಳು ಅಳುತ್ತಿದ್ದರೆ ಹೆತ್ತ ಹೊಟ್ಟೆಯು ಚುರ್ ಎನ್ನದೆ ಇರುವುದು ಎಂತು ? ಬುಲೇಸನಿಗೆ ತನ್ನ ಮಗನನ್ನು ಆ ಹುಡುಗಿಯು ಬಯ್ದುದೂ ಮಗುವು ದಿಕ್ಕಿಲ್ಲದ ಪರದೇಸಿಯಂತೆ ಗೋಡೆಯ ಹಿಂದೆ ಬಿಕ್ಕಿ ಬಿಕ್ಕಿ ಅಳುತ್ತ ನಿಂತಿದ್ದುದೂ ಸಹಿಸಲಿಲ್ಲ. ಬಂದು ಮಗುವನ್ನು ಎತ್ತಿಕೊಂಡು ಸಮುದಾಯಿಸಿ ಮನೆಯೊಳಕ್ಕೆ ಕರೆದುಕೊಂಡು ಬಂದು ತೊಡೆಯಮೇಲೆ ಕೂರಿಸಿಕೊಂಡು ಆಡಿಸುತ್ತಿದ್ದನು.

ಹುಡುಗಿಯು ಎಲ್ಲೋ ಹೋಗಿದ್ದವಳು ಬಂದು ನೋಡಿದಳು. ಅಪರಿಚಿತನೊಬ್ಬನು ಬಂದಿದ್ದಾನೆ. ಮಗುವನ್ನು ಎತ್ತಿಕೊಂಡು ಆಡಿಸುತ್ತಿದ್ದಾನೆ. ಅವನ ಮೈಮೇಲೆ ಕವಚವು ಥಳಥಳನೆ ಹೊಳೆಯುತ್ತಿದೆ. ಭಾರಿಯ ಆಳು. ನೋಡಿ ಅವಳು ನಡುಗಿದಳು. "ಮಗುವನ್ನು ಗದರಿಸಿಕೊಂಡೆಯಲ್ಲ ಹುಟ್ಟಿಸಿದವನ ಮೊಕ ಕೂಡ ಕಾಣೆಯೆಂದು. ನಾನೇ ಇವರಪ್ಪ" ಎಂದನು. ಹುಡುಗಿಯು ಇನ್ನು ತನಗೇನಾಗುವುದೋ ಎಂದು ಹೆದರಿ ಹೇಳಿಕೇಳದೆ ಊರದಾರಿ ಹಿಡಿದು ಓಡಿದಳು.

ಇನ್ನೂ ಅಷ್ಟು ಹೊತ್ತಿಗೆ ಸೆಕ್‌ಕೆಪೆಗಳು ಬಂದಳು. ಅವಳೂ ಮಗನನ್ನು ಆಡಿಸುತ್ತ ಕುಳಿತಿರುವ ಅಪರಿಚಿತನನ್ನು ಕಂಡು ಬೆದರಿದಳು. ಅಪರಿಚಿತನು "ರಾಜಪುತ್ರಿ ! ನಿನ್ನ ಗಂಡನಾರು ?" ಎಂದು ಕೇಳಿದನು. ಅವಳು ರೂಪವನ್ನು ಕಾಣದಿದ್ದರೂ ದನಿಯನ್ನು ಕೇಳಿಬಲ್ಲಳು. ಆದರೂ ಏನು ಹೇಳಬೇಕು ? ಏನು ಹೇಳಬೇಕೋ ತಿಳಿಯದೆ ತಲೆಯನ್ನು ಬಗ್ಗಿಸಿದಳು. ಅಪರಿಚಿತನು "ಗಾಬರಿಯಾಗಬೇಡ. ನಾನೇ ಬುಲೇಕ್, ನೀರಿನೊಡೆಯ. ನಿನ್ನನ್ನು ಒಲಿದು ಮದುವೆಮಾಡಿಕೊಂಡ ನಿನ್ನ ಗಂಡ. ನನ್ನನ್ನು ಗುರುತಿಸಲಾರದೆ ಇದ್ದರೂ ನನ್ನ ದನಿಯನ್ನು ಗುರುತಿಸಬಲ್ಲೆಯಲ್ಲವೆ ?" ಎಂದು ಕೇಳಿದನು.

ಹೆಂಡತಿಯು ಗಂಡನನ್ನು ಗುರುತಿಸಿದಳು.

ಬುಲೇನನು "ಮಡದಿ! ಇದುವರೆಗೂ ನಾನು ಬರಲಿಲ್ಲವೆಂದು ಚಿಂತಿಸಬೇಡ. ಇನ್ನು ಮುಂದೆ ನಾನು ಎಲ್ಲಿಯೂ ಹೋಗುವುದಿಲ್ಲ. ನಿನ್ನ ಜೊತೆಯಲ್ಲಿಯೇ ಇರುವೆನು" ಎಂದು ಮಾತು ಕೊಟ್ಟನು.

ಅವನು ಮಾತಿಗೆ ತಪ್ಪಲೂ ಇಲ್ಲ. ಅವನು ತನ್ನ ಬಂಧುಬಳಗದವರನ್ನೆಲ್ಲ ಕರೆದುಕೊಂಡು ಬಂದು ಅಲ್ಲಿಯೇ ನೆಲಸಿ ಊರು ಕಟ್ಟಿಕೊಂಡು ಸುಖವಾಗಿದ್ದನು.

---

## ಅಕ್ಕತಂಗಿಯರು

ದೊಡ್ಡ ಬೆಟ್ಟದ ಬುಡದಲ್ಲಿ ಒಬ್ಬನಿದ್ದನು. ಅವನಿಗೆ ಇಬ್ಬರು ಹೆಣ್ಣು ಮಕ್ಕಳು. ದೊಡ್ಡವಳ ಹೆಸರು ಕಾಜಿ; ಚಿಕ್ಕವಳ ಹೆಸರು ಜನ್ಯಾನಿ. ಕಾಜಿಯು ಚೆನ್ನಾಗಿ ಎತ್ತರವಾಗಿ ಬೆಳೆದ ಹೆಣ್ಣು. ನೋಡುವುದಕ್ಕೆ ಒಳ್ಳೆ ಚೆಲುವೆ. ಆದರೇನು? ಯಾವಾಗಲೂ ಜಗಳವಾಡುವಳು. ಬೆಳಗಾದರೆ ಜಗಳ, ಸಂಜೆಯಾದರೆ ಜಗಳ. ತಂದೆ ಮನೆಯಲ್ಲಿ ಇದ್ದರೆ ಅವನೊಡನೆ ಜಗಳ. ಅವನಿಲ್ಲದಿದ್ದರೆ ತಂಗಿಯೊಡನೆ ಜಗಳ. ಇದರ ಜೊತೆಗೆ ಸೋಮಾರಿ, ಯಾವ ಕೆಲಸವನ್ನೂ ಮಾಡಳು. ಇವಳ ತಂಗಿ ಜನ್ಯಾನಿ ಎಲ್ಲ ವಿಧದಲ್ಲೂ ಇವಳಿಗೆ ಪ್ರತಿ. ಅವಳು ಇವಳಷ್ಟು ರೂಪವತಿಯಲ್ಲ; ಇವಳ ಹಾಗೆ ಜಗಳಗಂಟಿಯಂತೂ ಅಲ್ಲವೇ ಅಲ್ಲ. ಬೆಳಗಿಂದ ಸಂಜೆಯವರೆಗೂ ಬಾಯಿ ಮುಚ್ಚಿಕೊಂಡು ತನ್ನ ಪಾಲಿಗೆ ಬಂದ ಕೆಲಸವನ್ನು ಅಚ್ಚುಕಟ್ಟಾಗಿ ಯಾರು ನೋಡಿದರೂ ಮೆಚ್ಚುವಂತೆ ಮಾಡುವಳು. ಬಾವಿಯಿಂದ ನೀರುಸೇದುವುದು, ಕಟ್ಟಿಗೆ ಒಡೆಯುವುದರಿಂದ ಹಿಡಿದು, ಗುಡಿಸಿಲಿನ ಹಂದರ ಸರಿ ಮಾಡುವವರೆಗೂ ಎಲ್ಲ ಕೆಲಸವನ್ನೂ ಬಲ್ಲಳು. ನಗುನಗುತ್ತಾ ಮಾತನಾಡಿ ಯಾರನ್ನು ಬೇಕಾದರೂ ಮೆಚ್ಚಿಸುವಳು.

ಅಕ್ಕನು ಯಾವೊತ್ತಾದರೂ ಅಡುಗೆ ಮಾಡಬೇಕಾಗಿ ಬಂದರೆ ಅವತ್ತು ಅರೆಬೆಂದ ಅನ್ನ, ಸೀದುಹೋದ ರೊಟ್ಟಿ ತಪ್ಪದು. ಹೋಗಲಿ ಅಡುಗೆ ಬೇಡ, ಹಿಟ್ಟುಬೀಸು ಎಂದರೆ ಶುದ್ಧ ತರಿ ಮಾಡಿಡುವಳು. ಏನು ಹೀಗೆ ಎಂದರೆ ಬಾರುದ್ದ ನಾಲಗೆ ಮಾಡಿಕೊಂಡು ಜಗಳಕ್ಕೆ ಬರುವಳು. ಹೀಗಾಗಿ ತಂದೆಗೆ ಸದ್ಯಕ್ಕೆ ಈ ಪ್ರಾರಬ್ಧವನ್ನು ಯಾರಾದರೂ ಕಟ್ಟಿಕೊಂಡು ಹೋದರೆ ಸಾಕಲ್ಲ ಎನ್ನಿಸಿತ್ತು.

ಒಂದು ದಿವಸ ತಂದೆಯು ಹೆಣ್ಣುಮಕ್ಕಳನ್ನು ಮನೆಯಲ್ಲಿ ಬಿಟ್ಟು ಸಂತೆಗೆ ಹೋದನು. ಸಂತೆಯಲ್ಲಿ ಮಾರುವುದು ಕೊಳ್ಳುವುದು ಮುಗಿಸಿ ಕೊಂಡು ತನ್ನ ಸ್ನೇಹಿತರ ಜೊತೆಯಲ್ಲಿ ಅವರೂರಿಗೂ ಹೋದನು. ದಾರಿಯಲ್ಲಿ ಆ ಮಾತು ಈ ಮಾತು ಬಂತು. "ಈ ಸಲ ಮಿಡಿತೆಗಳ ಹೊಡೆತ ಏನು ಹೇಳಲಿ? ಈ ಸಲ ಬಂದಿದ್ದಷ್ಟು ಮಿಡಿತೆ ಇದುವರೆಗೆ ನಾನು ನೋಡಿರಲಿಲ್ಲ. ನಾವು ಏನುಮಾಡಿದರೂ ಆ ಮಿಡಿತೆಯ ದಂಡು ತಡೆಯುವುದಕ್ಕೆ ಆಗಲಿಲ್ಲ. ಕೊನೆಗೆ ಒಂದು ಹಸಿರು ಕಡ್ಡಿ ಕೂಡ ಬಿಡದೆ ತಿಂದುಹಾಕಿದುವು. ಇದರ ಜೊತೆಗೆ ನಿಮ್ಮ ಬೆಟ್ಟದಿಂದ ಹೆಬ್ಬುಲಿ ಬಂದು ಕುರಿಗಳನ್ನೆಲ್ಲ ಹೊತ್ತುಕೊಂಡು ಹೋಯಿತು. ಹೀಗೆ ನಾವು ಪಾಳ್ಯದವರೆಲ್ಲ ಒದ್ದಾಡುತ್ತಿರುವಾಗ, ನೋಡು ನಮ್ಮ ಒಡೆಯನಿಗೆ ಮಡದಿಯ ಚಿಂತೆ ಹಿಡಿದಿದೆ. ಅವನು ಇದೇ ವರುಷ ಮದುವೆಯಾಗಬೇಕಂತೆ!" ಎಂದು ಗೆಳೆಯರು ತಮ್ಮ ಸುಖದುಃಖ ಹೇಳಿ ಕೊಳ್ಳುತ್ತ ತಮಗೆ ಗೊತ್ತಿದ್ದ ಸುದ್ದಿಯೆಲ್ಲ ಹೇಳಿ ಮುಗಿಸಿದರು.

ಆ ಗೆಳೆಯರು ಹೇಳಿದ ಅರಸನನ್ನು ನೋಡಿದ್ದವರು ಒಬ್ಬರೂ ಇಲ್ಲ. ಅವನ ವಿಚಾರವಾಗಿ ಒಬ್ಬೊಬ್ಬರು ಒಂದೊಂದು ಮಾತು ಹೇಳುತ್ತಿದ್ದರು. ಕೆಲವರು ಅವನು ಒಳ್ಳೆಯ ಸುಂದರಪುರುಷ ಎಂದು ಹೊಗಳುವರು. ಇನ್ನು ಕೆಲವರು "ಸರಿ, ಸರಿ, ನಿಮಗೇನು ಗೊತ್ತು? ಅದೊಂದು ಮಹಾಭೂತ, ಐದು ಹೆಡೆಯ ಹಾವು ಅದು. ಒಂದೊಂದು ಹಲ್ಲು ಒಂದೊಂದು ಗೇಣುದ್ದ, ಒಂದೊಂದು ನಾಲಗೆ ಮಾರು ಮಾರುದ್ದ. ಯಾರಾದರೂ ಕೊಂಚ

ರೇಗಿಸಿದರೆ, ಆಯಿತು, ಮುಗಿಯಿತು ಅವರ ಹಣೆಯ ಬರಹ! ಅವರನ್ನು ಗುಳಕ್ಕನೆ ನುಂಗಿಬಿಡುವನಂತೆ!" ಎನ್ನುವರು.

ಇವನು ಎಲ್ಲವನ್ನೂ ಕೇಳಿದನು. "ನಮ್ಮ ಕಾಜಿಗೆ ಸರಿಯಾದ ವರ! ಅವಳ ಜಂಭದಲ್ಲಿ ಅರಸನನ್ನು ಹೊರತು ಇನ್ನು ಯಾರನ್ನೂ ಮದುವೆಯಾಗು ವುದಿಲ್ಲ. ಇವಳ ಹಟ, ಇವಳ ನಾಲಗೆ ಮುಂದೆ ಅವನು ಎಂಥವನಾದರೂ ಅವನ ಆಟ ನಡೆಯುವುದಿಲ್ಲ. ಹೀಗಾದರೆ, ಕಂತೆಗೆ ತಕ್ಕ ಬೊಂತೆಯಾಗಿ ಇಬ್ಬರಿಗೂ ಸರಿಹೋಗುತ್ತದೆ" ಎಂದು ಯೋಚಿಸಿಕೊಂಡು ಮನೆಗೆ ಬಂದನು.

ಮನೆಗೆ ಬಂದವನೇ ಮಕ್ಕಳನ್ನು ಕರೆದು ಎಲ್ಲವನ್ನೂ ಹೇಳಿ, "ಆ ಅರಸನನ್ನು ಯಾರು ಮದುವೆ ಮಾಡಿಕೊಳ್ಳುತ್ತೀರಿ?" ಎಂದು ಕೇಳಿದನು. ಕಾಜಿಯು ಜನ್ನಾನಿಯು ಮಾತಾಡುವುದಕ್ಕೇ ಅವಕಾಶ ಕೊಡದೆ "ನಾನು! ಅವನನ್ನು ಮದುವೆಯಾಗುವಳು ನಾನು!" ಎಂದಳು. ತಂದೆಯು "ಹಾಗೆಯೇ ಆಗಲಿ, ನಾಳೆ ನಮ್ಮ ಬಂಧುಮಿತ್ರರನ್ನೆಲ್ಲ ಕರೆಸುತ್ತೇನೆ. ಎಲ್ಲರೂ ಕರೆದುಕೊಂಡು ಹೋಗಿ ಬಿಟ್ಟು ಬರುತ್ತೇವೆ" ಎಂದನು.

ಕಾಜಿಯು "ನೀವು ಯಾರೂ ನನ್ನ ಜೊತೆಯಲ್ಲಿ ಬರಬೇಕಾಗಿಲ್ಲ, ನಾನೇ ಹೋಗುತ್ತೇನೆ, ಯಾರು ಬಂದು ನನಗೇನಾಗಬೇಕು?" ಎಂದಳು. ತಂದೆಗೆ ಕೋಪ ಬಂತು. ತನ್ನ ಮಗಳು ಅನಾಥಳ ಹಾಗೆ ಒಬ್ಬಂಟಿಗಳಾಗಿ ಅತ್ತೆಯ ಮನೆಗೆ ಹೋಗುವುದೆ? ಕೊನೆಗೆ ಒಂದು ಎತ್ತಾದರೂ ಬಳುವಳಿ ತೆಗೆದುಕೊಂಡು ಹೋಗಬೇಡವೆ? ಎಂದು ಬಹಳ ಅಸಮಾಧಾನವಾಯಿತು. ಆದರೇನು ಮಾಡುವುದು? ಬಿರುಗಾಳಿಯನ್ನಾದರೂ ಅಡ್ಡಹಾಕಿ ತಡೆಯ ಬಹುದು, ಈ ಹಟಮಾರಿಯ ಮನಸ್ಸು ತಿರುಗಿಸುವುದಕ್ಕಾಗುವುದಿಲ್ಲ ಎಂದು ಕೊಂಡು ನಿನಗೆ ತೋರಿದಹಾಗೆ ಮಾಡಿಕೋ ಎಂದು ಸುಮ್ಮನಾದನು.

ಮರುದಿನ ಬೆಳಗಾಗುತ್ತಿದ್ದ ಹಾಗೆಯೇ ಕಾಜಿಯು ಎದ್ದಳು. ತನ್ನ ಕಾಲುಕಡಗ, ತೋಳಬಂದಿ (ಎಲ್ಲವೂ ಹಿತ್ತಾಳೆಯವು) ಎಲ್ಲವನ್ನೂ ಉಜ್ಜಿ ಉಜ್ಜಿ ಥಳಪಳನೆ ಹೊಳೆಯುವ ಹಾಗೆ ಮಾಡಿ ತೊಟ್ಟುಕೊಂಡಳು. ಒಳ್ಳೆಯ

ರಂಗಾಗಿ ರಂಜಿಸುತ್ತಿರುವ ಮಣಿಗಳ ಮಾಲೆಯನ್ನು ಹಾಕಿಕೊಂಡಳು. ಗುಡಿಸಲು ಮುಗ್ಗುಲಲ್ಲಿದ್ದ ಹಳ್ಳಕ್ಕಿಳಿದು ನೀರಿನ ಹಾಸುಗನ್ನಡಿಯಲ್ಲಿ ತನ್ನ ಸೊಬಗನ್ನು ನೋಡಿಕೊಂಡು ತಾನೇ ಮೆಚ್ಚಿಕೊಂಡು "ನನ್ನಂಥವಳನ್ನು ಮದುವೆ ಮಾಡಿಕೊಳ್ಳುವುದಕ್ಕೆ ಅದೃಷ್ಟವಿರಬೇಡವೆ? ಒಳುವಳಿಯಿಲ್ಲವಂತೆ! ದೇವರು ನನಗೆ ಕೊಟ್ಟಿರುವ ಈ ರೂಪಿಗಿಂತ ಇನ್ನೇನು ಬಳುವಳಿಬೇಕು?" ಎಂದು ತನ್ನನ್ನು ತಾನೇ ಮೆಚ್ಚಿಕೊಂಡಳು.

ಗುಡಿಸಿಲಿಗೆ ಬಂದು ಒಂದು ಬುಟ್ಟಿಯಲ್ಲಿ ರೊಟ್ಟಿ ಹಣ್ಣು ತುಂಬಿ ಕೊಂಡು ಯಾರಿಗೂ ಹೇಳದೆ ಕೇಳದೆ ಹೊರಟೇಬಿಟ್ಟಳು. "ತಂದೆಗೆ ಹೇಳ ದಿದ್ದರೆ ಏನು? ಕೋಪ ಬರುತ್ತದೆ. ಕೋಪ ಬಂದರೆ ಬಳುವಳಿ ಕೊಡುವು ದಿಲ್ಲ. ಅದೇ ಬೇಡ. ಊರವರಿಗೆ ಹೇಳದೆ ಇದ್ದರೆ ಏನು? ಯಾರೂ ನನ್ನ ಜೊತೆಯಲ್ಲಿ ಬರುವುದಿಲ್ಲ. ಬರದಿದ್ದರೆ ಉಳಿದುಹೋಗುವುದೇನು? ಯಾರು ಬಂದು ಏನಾಗಬೇಕು? ಅವನು ಮದುವೆ ಮಾಡಿಕೊಳ್ಳುವುದು ನನ್ನನ್ನೋ ನನ್ನ ಹಿಂದೆ ಬಂದವರನ್ನೋ?" ಎಂದು ತಲೆಹರಟೆಯ ಮಾತು ಗಳನ್ನು ಆಡಿಕೊಳ್ಳುತ್ತಾ ಹೊರಟೇ ಬಿಟ್ಟಳು. ತಂಗಿಗೂ ಕೂಡ ಹೋಗಿ ಬರುವೆನೆಂದು ಹೇಳಲಿಲ್ಲ.

ಬಯಲಿನ ಅಂಚಿನಲ್ಲಿ ಭಾಸ್ಕರನು ಕಾಣಿಸಿಕೊಂಡು ಬೆಟ್ಟಗಳಿಗೆಲ್ಲ ತನ್ನ ಕಿರಣಗಳ ಚಿನ್ನವನ್ನು ಎಸೆಯುತ್ತಿದ್ದನು. ಗಾಳಿಯೂ ಚಳಿಯೆಂದು ಬಿಳಿಯ ದುಪ್ಪಟಿಯನ್ನು ಹೊದೆದ ಮುದುಕನಂತೆ ಸಣ್ಣ ಮಂಜನ್ನು ಚೆಲ್ಲುತ್ತಾ ಸಣ್ಣಗೆ ಬೀಸುತ್ತಿತ್ತು. ಆದಷ್ಟು ಬೇಗ ಪ್ರಯಾಣವನ್ನು ಮುಗಿಸಿಬೇಕೆಂದು ಕಾಜಿಯು ಸರಸರನೆ ನಡೆದಳು. ಅವಳಿಗೇನು! ಅರಸ ನನ್ನು ಮದುವೆಯಾಗುವೆನೆಂದು ಆನಂದವೋ ಆನಂದ! ಚೆಂಡಿನ ಹಾಗೆ ಚಿಮ್ಮಿ ಪುಟಕರಿಸಿ ನೆಗೆನೆಗೆದು ನಡೆಯುತ್ತಿದ್ದಾಳೆ. ಅವಳಿಗೆ ಸಂತೋಷವು ತುಂಬಿ ಹೊರಸೂಸುವಷ್ಟು ಆಗಿ ಹಾಡುವುದಕ್ಕೂ ಮೊದಲು ಮಾಡಿದಳು.

ಅಷ್ಟು ದೂರ ಹೋದ ಮೇಲೆ ಅವಳಿಗೆ ಹಸಿವಾಯಿತು. ತಂದಿದ್ದ

ರೊಟ್ಟಿ ಹಣ್ಣು ಅಷ್ಟು ತಿನ್ನುವುದು ಎಂದು ನೀರಿನ ಮಗ್ಗುಲಲ್ಲಿ ಬೆಳೆದಿದ್ದ ಒಂದು ಮರದ ಕೆಳಗೆ ಕುಳಿತಳು. ಅವಳು ರೊಟ್ಟಿ ತಿನ್ನುತ್ತಿರುವಾಗ ಕಾಲು ಕೆರೆದಂತಾಯಿತು. ಏನು ಎಂದು ನೋಡಿದರೆ ಒಂದು ಸುಂಡಿಲಿ. ಏನೋ ಹೇಳುವುದಕ್ಕೆ ಬಂದ ಹಾಗೆ ತಲೆಯೆತ್ತಿಕೊಂಡು ನೋಡಿತು. 'ಅದೇನೋ ಕೇಳೋಣ' ಎನ್ನಿಸಿ ಕಾಜೆಯು "ಏನು ಅಮ್ಮಯ್ಯ! ಏನು?" ಎಂದಳು. ಇಲಿಯು "ಅರಸನ ಬಳಿಗೆ ಕರೆದುಕೊಂಡು ಹೋಗಲೆ? ಅಕ್ಕಯ್ಯ!" ಎಂದು ಕೇಳಿತು.

ಕಾಜೆಗೆ ತಡೆಯಲಾರದಷ್ಟು ನಗುಬಂತು. ಬಾಯಿಬಿಟ್ಟು ಗಹ ಗಹಿಸಿ ನಕ್ಕು "ಅಯ್ಯೋ ಹುಚ್ಚುಮುಕ್ಕ! ಎದ್ದು ಹೋಗು. ಅರಸನ ಮನೆಗೆ ದಾರಿಯನ್ನು ಈ ಸುಂಡಿಲಿ ಮುಕ್ಕ ತೋರಿಸದಿದ್ದರೆ ನನಗೆ ತಿಳಿಯು ವುದೇ ಇಲ್ಲವೇನೋ!" ಎಂದು ಅದನ್ನು ಅತ್ತ ಒದ್ದಳು. ಇಲಿಯು ಹಾರಿ ದೂರ ನಿಂತು "ಜೋಕೆ! ಒಬ್ಬಳೇ ಹೋದರೆ ಕೇಡು ತಪ್ಪದು" ಎಂದಿತು. ಕಾಜೆಯು ನಕ್ಕು ಇಲಿಯನ್ನು ಹೊಡೆಯಲು ಒಂದು ಕಲ್ಲು ತೆಗೆದು ಕೊಂಡಳು. ಇಲಿಯು ಹೇಳದೆ ಕೇಳದೆ ಓಡಿಹೋಯಿತು.

ಕಾಜೆಯು ಮುಂದೆ ಮುಂದೆ ನಡೆದಳು. ದಾರಿಯಲ್ಲಿ ಒಂದು ಹಳ್ಳ ಸಿಕ್ಕಿತು. ಆ ವೇಳೆಗೆ ನಡುಹಗಲಾಗಿತ್ತು. ಅಲ್ಲಿ ಒಂದು ಗಳಿಗೆ ಕುಳಿತಿದ್ದು ತಣ್ಣನೆ ನೀರಿನಲ್ಲಿ ಕಾಲಿಟ್ಟುಕೊಂಡು ಅಷ್ಟು ಹೊತ್ತು ಸುದಾರಿಸಿಕೊಂಡು ಮುಂದೆ ಹೋದಳು.

ಹೋಗುತ್ತಿರುವಾಗ ದಾರಿಯಲ್ಲಿ ಒಂದು ಬಂಡೆಯ ಮೇಲೆ ಒಬ್ಬಳು ಮುದುಕಿಯು ಕುಳಿತಿದ್ದಳು. ಅವಳು ಹೇಳಿದಳು: "ಕಾಜೆ! ನೀನು ಎಲ್ಲಿಗೆ ಹೋಗುತ್ತಿರುವೆಯೆಂದು ನಾನು ಬಲ್ಲೆ. ನನ್ನ ಮಾತು ಕೇಳು. ಸಂಜೆಗೆ ನಿನಗೆ ಒಂದು ಕಾಡು ಸಿಕ್ಕುವುದು. ಅಲ್ಲಿ ಮರಗಳು ಬಲು ಒತ್ತಾಗಿ ಬೆಳೆದಿವೆ. ಅಲ್ಲಿಗೆ ನೀನು ಹೋದಕೂಡಲೇ ಅವೆಲ್ಲಾ ನಿನ್ನನ್ನು ನೋಡಿ ನಗುವುವು. ಆದರೆ, ನೋಡು, ಅವು ನಕ್ಕವೆಂದು ನೀನು ಎಲ್ಲಾ

ದರೂ ಸಕ್ಕೀಯೆ! ನೀಸು ಸಕ್ಕ ಹೊರತು ಅವು ನಿಸ್ನಸ್ನು ಏನೂ ಮಾಡ ಲಾರವು. ಅವು ಸಕ್ಕವಲ್ಲಾ ಎಂದು ನೀಸೂ ಹಿಂತಿರುಗಿ ನಕ್ಕರೆ, ನಿನಗೆ ಒಳ್ಳೆಯದಾಗುವುದಿಲ್ಲ."

"ಅಷ್ಟೇ ಅಲ್ಲ! ಆ ವನದ ಆಚೆ ಒಂದು ಸೋರೆ ಬುರುಡೆಯಲ್ಲಿ ಹಾಲು ಇಟ್ಟಿರುವುದು. ನಿನಗೆ ಹಸಿವಿನಿಂದ ಪ್ರಾಣಹೋಗುವಂತಿದ್ದರೂ ಸರಿ, ನೀನು ಅದನ್ನು ಕುಡಿಯ ಬೇಡ. ಅಲ್ಲಿಂದ ಮುಂದಕ್ಕೆ ಹೋದರೆ ಒಬ್ಬ ಮನುಷ್ಯನು ನೀರು ಹೊತ್ತುಕೊಂಡು ಬಂದು ಕುಡಿ ಎಂದು ಕೊಡು ವನು. ನಿನಗೆ ಬಾಯಾರಿ ನಾಲಿಗೆ ಒಣಗಿ ಅಂಗುಳಿಗೆ ಹತ್ತಿಹೋಗಿದ್ದರೂ ಸರಿಯೇ! ನೀನು ಅವನು ಕೊಟ್ಟ ನೀರನ್ನು ಕುಡಿಯ ಬೇಡ" ಎಂದು ಆ ಮುದುಕಿಯು ಬುದ್ಧಿ ಹೇಳಿದಳು.

ಅದನ್ನು ಕೇಳಿ ಕಾಜಿಗೆ ಕೋಪ ಬಂತು. "ಆಗ ಇಲಿಯಾಯ್ತು! ಈಗ ಈ ಮುದುಕಿ! ಏನು ಬುದ್ಧಿವಂತರು ಇವರು ನನಗೆ ಬುದ್ಧಿ ಹೇಳು ವುದಕ್ಕೆ! ಅಯ್ಯೋ ದೇವರೆ!........ ಆಗಲಜ್ಜಿ! ಇಷ್ಟಾದರೂ ಹೇಳಿದೆಯಲ್ಲ. ಎಷ್ಟೋ ಉಪಕಾರವಾಯ್ತು. ಆದರೆ ನಾನೇನೋ ನನಗೆ ತೋರಿದ ಹಾಗೇ ಮಾಡುವುದು" ಎಂದು ಮುಂದೆ ನಡೆದಳು. ಮುದುಕಿಯು ಮಾತನಾಡಲಿಲ್ಲ.

ಕಾಜಿಯು ಹಾಡೂಗೀಡು ಹಾಡಿಕೊಂಡು ಮುಂದಕ್ಕೆ ಹೊರಟಳು. ಮುದುಕಿಯು ಹೇಳಿದ್ದಂತೆ ಸಂಜೆಯಾಗುವ ವೇಳೆಗೆ ಒಂದು ಕಾಡು ಸಿಕ್ಕಿತು. ಅಲ್ಲಿ ಮರಗಳೂ ಬಹಳ ಒತ್ತೊತ್ತಾಗಿ ಬೆಳೆದಿದ್ದವು. ಅವಳು ಆ ಕಾಡಿನ ಹತ್ತಿರಕ್ಕೆ ಹೋಗುತ್ತಿದ್ದ ಹಾಗೆಯೇ ಅವಳಿಗೆ ಅಪಹಾಸ್ಯದ ನಗೆಯ ಕಲೆತವು ಕೇಳಿಸಿತು. ಅದನ್ನು ಲಕ್ಷ್ಯಸದೆ ಮುಂದೆ ನುಗ್ಗಿದಳು. ನಗೆಯು ಹೆಚ್ಚಿತು. ಮರಗಳೆಲ್ಲ ತಮ್ಮ ತಮ್ಮ ಕೊಂಬೆಗಳನ್ನು ಬೆರಳಿನ ಹಾಗೆ ಅವಳ ಕಡೆಗೆ ತೋರಿಸಿ ಅವಳನ್ನು ಗೇಲಿಮಾಡಿ ನಗುತ್ತಿರುವಂತೆ ನಗುವಿನ ಸದ್ದು ಕೇಳಿಸಿ ಇವಳಿಗೆ ಕೋಪವು ಹೆಚ್ಚಿತು. ಅದನ್ನು ಸೈರಿಸಿಕೊಂಡಷ್ಟೂ ಮರಗಳ ನಗುವು ಹೆಚ್ಚಾಯಿತು. "ಎಲಾ! ನನ್ನನ್ನು ನೋಡಿ ನಗಬೇಕಾದರೆ

ನಾನೇನು ಕಪಿಯೇ!" ಎನಿಸಿ ಅವಳಿಗೆ ಸಿಟ್ಟು ತಾನೇ ತಾನಾಯಿತು. ಕಾಡು ದಟ್ಟವಾಗಿ ಬೆಳೆದಿದೆ. ಕಪ್ಪಿನ ಕತ್ತಲೆ. ನಗುವವರು ಯಾರೋ ಕಾಣಿಸಲೊಲ್ಲದು ನಗೆ ಮಾತ್ರ ಕೇಳಿಸುತ್ತದೆ. ನಗುತ್ತಿದ್ದವರು ಅವಳ ಕೈಗೆ ಸಿಕ್ಕಿದ್ದರೆ ತೆಗೆದು ಕಪಾಳಕ್ಕೆ ಅಪ್ಪಳಿಸಿ ಬಿಡುತ್ತಿದ್ದಳು. ಅವಳಿಗೆ ಅಂತಹ ಕೋಪ ಬಂದಿತ್ತು. ಅಲ್ಲಿಗೂ ನಗುವು ನಿಲ್ಲಲಿಲ್ಲ. ಕಾಜೆಯ ಸೈರಣೆಯು ಮಾಯವಾಯಿತು. ಅವಳೂ ಹೆಹ್ಹೆಹ್ಹೇ ಎಂದು ಅಣಕಿಸಿದಳು. ಮರಗಳ ಹಾಸ್ಯಕ್ಕಿಂತ ಅವಳ ಅಣಕ ಕಡಿಮೆಯಾಗಿರಲಿಲ್ಲ.

ಅವಳು ಅಣಕಿಸುತ್ತಲೂ ಮರಗಳು ಸುಮ್ಮನಾದುವು. ಆ ನಿಶ್ಶಬ್ದದಲ್ಲಿ ಕಾಜೆಗೆ ತನ್ನೆದೆಯು ಹೊಡೆಯುವುದು ಕೂಡ ನಿಂತುಹೋಗುವಷ್ಟು ಮಟ್ಟಿಗೆ ಗಾಬರಿಯಾಯಿತು. ಕತ್ತಲು ಬಲಿಯಿತು. ಇನ್ನೊಂದು ಗಳಿಗೆಯೊಳಗಾಗಿ ದಢಾರ್ ಎಂದು ಸಿಡಿಲು ಹೊಡೆದಂತಾಯಿತು; ಕೂಡಲೆ ಮತ್ತೆ ನಗು. ಆ ನಗು ಮೊದಲಿಗಿಂತ ಕ್ರೂರ, ಭಯಂಕರ.

ಕಾಜೆಯ ಎದೆ ನಡುಗಿತು. ಅಲ್ಲಿ ನಿಲ್ಲುವುದಕ್ಕೆ ಹೆದರಿ ಓಡಿದಳು. ಆ ಕಾಡು ಕಳೆದು ಬಯಲಿಗೆ ಬರುವವರೆಗೂ ಏಳುವುದೂ ಬೀಳುವುದೂ ಕಾಣದೆ ಓಡಿದಳು. ಕಾಡು ಮುಗಿದು ಬಯಲಿಗೆ ಬರುವವೇಳೆಗೆ ಅವಳಿಗೆ ಪ್ರಾಣವೇ ಹೋಗುವಷ್ಟು ಆಯಾಸವಾಗಿತ್ತು, ಅಲ್ಲಿ ಒಂದಷ್ಟು ಹೊತ್ತು ಹುಲ್ಲಿನ ಮೇಲೆ ಬಿದ್ದುಕೊಂಡಿದ್ದು ಆಯಾಸ ಪರಿಹಾರಮಾಡಿಕೊಂಡು ಎದ್ದಳು.

ಎದ್ದು ಸುತ್ತಮುತ್ತಲೂ ನೋಡಿದರೆ ಅಲ್ಲೊಂದು ಸೋರೆಯ ಬುರುಡೆ, ಅದರ ತುಂಬ ಸೊರೆಹಾಲು. ಆಗತಾನೆ ಕರೆದಿಟ್ಟಂತಿದೆ. ಮುದುಕಿಯು ಹೇಳಿದ್ದುದು ನೆನೆಪಾಯಿತು. ಆದರೂ ಅದನ್ನು ಲಕ್ಷಿಸದೆ ಆದುದು ಆಗಲಿ ಎಂದು ಹಾಲನ್ನು ಗಟಗಟನೆ ಕುಡಿದೇಬಿಟ್ಟಳು.

ಈ ವೇಳೆಗೆ ಚೆನ್ನಾಗಿ ಕತ್ತಲು ಬಲಿಯಿತು. ಮುಂದಕ್ಕೆ ಹೋಗುವುದಕ್ಕೆ ಹೆದರಿಕೆಯಾಯಿತು. ಆದರೂ ಆ ಅಪಹಾಸ್ಯದ ಕಾಡಿನ ಬಳಿ ಇರಲು ಧೈರ್ಯವಾಗದೆ ಆದುದು ಆಗಲಿ ಎಂದು ಮುಂದಕ್ಕೆ ಹೊರಟಳು.

ಅಷ್ಟುದೂರ ಹೋಗುವುದರೊಳಗಾಗಿ ಒಬ್ಬ ವಿಚಿತ್ರಪುರುಷನು ಎದುರಿಗೆ ಬಂದನು. ಅವನಿಗೆ ತಲೆಯಿದ್ದುದು ಕತ್ತಿನ ಮೇಲಲ್ಲ, ಕಂಕುಳಿನ ಕೆಳಗೆ. ಒಂದು ಕಂಕುಳಿನಲ್ಲಿ ತಲೆ, ಇನ್ನೊಂದು ಕಂಕುಳಲ್ಲಿ ನೀರಿನ ಗಡಿಗೆ, ಸಾಲದುದಕ್ಕೆ ಗೂನು, ನೆಲದವರೆಗೂ ಬಗ್ಗಿಹೋಗಿದ್ದಾನೆ. ಅವನ ನಡಿಗೆಯೂ ಅವನಷ್ಟೇ ವಿಚಿತ್ರ. ಅವನು ಕಾಲು ಎಳೆದೆಳೆದು ಹಾಕುತ್ತಿದ್ದರೆ ಗುಡಿಸುವ ಪರಕೆಗಳು ಚಲಿಸುವಂತೆ ಕಾಣುವುದು.

"ಮುದುಕಿಯು ಹೇಳಿದಂತೇ ಆಗದೆ, ಆಗಲಿ, ಇವನ ಹತ್ತಿರ ನೀರು ಈಸಿಕೊಂಡು ಕುಡಿದೇ ಕುಡಿಯಬೇಕು, ಆದುದು ಆಗಲಿ" ಎಂದು, ಅವನನ್ನು ನೋಡಿ ತನಗಾದ ಭೀತಿಯನ್ನೆಲ್ಲ ನುಂಗಿಕೊಂಡು, ನೇರವಾಗಿ ಅವನ ಹತ್ತಿರಕ್ಕೆ ಹೋಗಿ "ನನಗೆ ಕುಡಿಯುವುದಕ್ಕೆ ನೀರು ಕೊಡು" ಎಂದು ಕೇಳಿದಳು.

ಅವನು ಮರುಮಾತಾಡದೆ ನೀರಿನ ಗಡಿಗೆಯನ್ನು ಕೊಟ್ಟನು. ಹುಡುಗಿಯು ಎಷ್ಟೋ ಧೈರ್ಯವಾಗಿದ್ದರೂ, ಆ ಕಂಕುಳಿನಲ್ಲಿದ್ದ ತಲೆಯ ಕಣ್ಣುಗಳು ಹೊರಳುತ್ತಿರುವುದನ್ನೂ ಹಲ್ಲುಗಳು ಕಟಕಟನೆ ಕಡಿಯುತ್ತಿರುವುದನ್ನೂ ಕಂಡು, ಕೇಳಿ, ಅವಳಿಗೆ ಎದೆ ಡವಡವ ಎನ್ನುತ್ತಿತ್ತು.

ಆ ವಿಚಿತ್ರ ಮನುಷ್ಯನು ಹೊರಟುಹೋಗುತ್ತಲೂ ಕಾಜಿಯು ಅಲ್ಲಿಯೇ ಮಲಗಿಕೊಂಡಳು. ಆಯಾಸವು ಬಹಳವಾಗಿದ್ದು ಅವಳಿಗೆ ಮಲಗಿದ ಕೂಡಲೇ ನಿದ್ದೆಯು ಬಂದುಬಿಟ್ಟಿತು. ಏಳುವ ವೇಳೆಗೆ ಬೆಳಗಾಗಿತ್ತು. ಹುಡುಗಿಯು ಮದುವಣಿಗಸಿದ್ದ ಊರಿಗೆ ಬಂದಳು.

ಊರಿನವರೆಲ್ಲರೂ ಈ ಚಲುವೆಯನ್ನು ಕಂಡು ಹತ್ತಿರ ಬಂದು ಯಾರು, ಯಾಕೆ ಬಂದಳು ಎಂದು ವಿಚಾರಿಸಿದರು. ಅರಸನನ್ನು ಮದುವೆಯಾಗಲು ಬಂದವಳೆಂದು ತಿಳಿದು ಅವರ ಕುತೂಹಲವು ಇಮ್ಮಡಿಸಿತು. "ಇದೇನು? ಮದುವಣಗಿತ್ತಿಯ ದಿಬ್ಬಣವೆಲ್ಲಿ? ಬಳುವಳಿಯೆಲ್ಲಿ?" ಎಂದು ಆಶ್ಚರ್ಯಪಟ್ಟು, "ಅರಸನು ಈಗ ಮನೆಯಲ್ಲಿ ಇಲ್ಲ. ಸಂಜೆಗೆ ಬರುವನು

ಹೋಗಿ, ಅವನು ಬರುವ ವೇಳೆಗೆ ಬಿಸಿಯಾಗಿ ರುಚಿಯಾಗಿ ಅಡುಗೆ ಮಾಡಿಟ್ಟಿರು" ಎಂದು ಹೇಳಿಕಳುಹಿಸಿದರು.

ಅವಳಿಗಾಗಿ ಒಂದು ಗುಡಿಸಲು ಬಿಟ್ಟುಕೊಟ್ಟರು. ಊರಿನ ಹೆಂಗಸರು ಧಾನ್ಯಗಳನ್ನು ತಂದಿಟ್ಟರು. ಕಾಜಿಯು ಕಾಳನ್ನೆಲ್ಲಾ ಬೀಸಿ ಹಿಟ್ಟು ಮಾಡಿ ರೊಟ್ಟಿ ತಟ್ಟಬೇಕಾಗಿತ್ತು. ಆದರೆ ಅವಳು ಅದುವರೆಗೆ ಆ ಕೆಲಸವನ್ನು ಮಾಡಿದ್ದವಳಲ್ಲ. ಏನಿದ್ದರೂ ಬಾರುದ್ದದ ನಾಲಗೆಯ ಬಿರುಸಿನಿಂದ ಮಾತು ಆಡುವುದೊಂದು ಮಾತ್ರ ಬಲ್ಲಳು. ಏನು ಕೆಲಸವಿದ್ದರೂ ಜನ್ಯಾನಿಯೇ ಮಾಡುವವಳು. ಕೊನೆಗೆ ಬೀಸಿದಳು. ಬೀಸುವುದೂ ಒಂದು ವಿದ್ಯೆಯಲ್ಲವೆ? ಅದನ್ನೂ ಕಲಿಯ ಬೇಡವೆ? ಕಾಜಿಯು ಬೀಸಿದರೆ, ಹಿಟ್ಟು ಬರಿಯ ತರಿಯಾಯಿತು. ಆದರೇನು ಎಂದುಕೊಂಡು ಅದನ್ನೇ ಕಲಿಸಿ ರೊಟ್ಟಿ ಮಾಡಿದಳು. ಅದೂ ಅಭ್ಯಾಸವಿಲ್ಲ. ರೊಟ್ಟಿಯೆಲ್ಲ ಸೀದು ಹೋಯಿತು. "ನನಗೆ ಬೀಸುವುದಕ್ಕೆ ಬರದು, ಸುಡುವುದಕ್ಕೆ ಬರದು. ಬರದಿದ್ದರೇನು? ಅರಸನನ್ನು ಮದುವೆಯಾದವಳು ಯಾವಳು ತಾನೇ ಧಾನ್ಯ ಬೀಸಿಕೊಂಡು ರೊಟ್ಟಿ ತಟ್ಟಿಕೊಂಡು ಕೂತಿರುತ್ತಾಳೆ?" ಎಂದು ಸಮಾಧಾನ ಹೇಳಿಕೊಂಡಳು.

ಸಂಜೆಯಾಯಿತು. ಇನ್ನು ಮದುವಣಿಗನು ಬರುವ ಹೊತ್ತಾಯಿತು, ಎಂದು ಕಾಜಿಯು ಬಾಗಿಲಿಗೆ ಬಂದು ನಿಂತುಕೊಂಡಳು. ಆ ವೇಳೆಗೆ ಚಂದ್ರೋದಯವಾಗಿತ್ತು. ಆದರೂ ಯಾರೂ ಬರಲಿಲ್ಲ. ಕಾಜಿಯೂ ಬಾಗಿಲಲ್ಲಿ ನಿಂತು ನಿಂತು ಸಾಕಾಗಿ ಒಳಕ್ಕೆ ಬಂದಳು.

ಕೊನೆಗೆ ಅರ್ಧರಾತ್ರಿಯ ವೇಳೆಗೆ, ಬೆಳಗುತ್ತಿದ್ದ ಚಂದ್ರನ ಬೆಳಕೆಲ್ಲ ಮಾಯವಾಗುವಷ್ಟು ಕತ್ತಲು ಹಿಡಿದು ಗಾಳಿಯೆದ್ದಿತು. ಆ ಗಾಳಿಯು ಗುಡಿಸಲಿನೊಳಕ್ಕೂ ನುಗ್ಗಿತು. ಆ ಗಾಳಿಯೊಡನೆ ಯಾರೋ ಬಂದಂತಾಯಿತು. ಕಾಜಿಯು ಯಾರೆಂದು ನೋಡಿದರೆ, ಒಂದು ಭಾರಿಯ ಹಾವು. ಐದು ತಲೆಗಳು. ಒಳ್ಳೆಯ ಬೆಂಕಿಯ ಕೆಂಡಗಳಂತಿರುವ ಹತ್ತು ಕಣ್ಣುಗಳಿಂದ ನೋಡುತ್ತ, "ನೀನೇಯೋ ನನ್ನ ಹೆಂಡತಿಯಾಗುವವಳು?"

ಎಂದು ಕೇಳಿತು. ಕಾಜಿಯು ಜೀವಮಾನದಲ್ಲಿ ಎಂದೂ ತಾನು ಅನುಭವಿಸದಿದ್ದ ಹೆದರಿಕೆಯನ್ನು ಅನುಭವಿಸುತ್ತಾ, ಅಂಜಿಕೆಯಿಂದ ಬಗ್ಗಿ ಹೌದು ಎಂದು ತಲೆತೂಗಿದಳು.

"ನೀನು ನೋಡುವುದಕ್ಕೇನೋ ಚೆನ್ನಾಗಿದ್ದೀಯೆ! ಅದಿರಲಿ. ಎಲ್ಲಿ ನನಗೆ ಊಟಕ್ಕೆ ಏನು ಮಾಡಿದ್ದೀಯೆ ತಾ" ಎಂದನು.

ಕಾಜಿಯು ಸುಟ್ಟು ಕರಿಯಾಗಿರುವ ರೊಟ್ಟಿಗಳನ್ನು ಕೈಗೆ ತೆಗೆದುಕೊಂಡಳು. ಅವಳಿಗೆ ಅಯ್ಯೋ! ಎನ್ನಿಸಿತು. ನನಗೆ ರೊಟ್ಟಿ ಚೆನ್ನಾಗಿ ಸುಡುವುದಕ್ಕೆ ಬಂದಿದ್ದರೆ ಎನ್ನಿಸಿತು. ನಡುಗುತ್ತ, ಅದನ್ನೇ ತಂದು ಹಾವಿನ ಮುಂದೆ ಇಟ್ಟಳು.

ಆ ಕರಿಕಲು ರೊಟ್ಟಿ ಕಂಡು ಹಾವಿಗೆ ರೇಗಿತು: "ನೀನು ಕಣ್ಣಿಗೆ ಹಿತ ಅಷ್ಟೆ! ಮೃಗಗಳ ಹೆಣ್ಣೆ! ಕೆಟ್ಟ ಹೆಣ್ಣೆ!" ಎಂದು ಒಂದು ಸಲ ಅಪ್ಪಳಿಸಿದನು. ಕಾಜಿಯ ಅವತಾರ ಪೂರ್ತಿಯಾಯಿತು.

ಇದಾಗಿ ವರ್ಷವಾಯಿತು. ಅರಸನು ಮದುವೆಯಾಗುವನೆಂದು ಮತ್ತೆ ಸುದ್ದಿಯು ಹಬ್ಬಿತು. "ಜನ್ಯಾನಿ! ನೀನು ಆ ಅರಸನನ್ನು ಮದುವೆಯಾಗುವೆಯಾ?" ಎಂದು ತಂದೆಯು ಮಗಳನ್ನು ಕೇಳಿದನು. ಮಗಳು ನಿನ್ನ ಇಷ್ಟವೇ ನನ್ನ ಇಷ್ಟವೆಂದಳು. ತಂದೆಯು ಸಂತೋಷಪಟ್ಟು ಬಳುವಳಿಯಾಗಿ ಒಂದು ಭಾರಿಯ ಎತ್ತನ್ನು ಆರಿಸಿಟ್ಟನು. ಬಂಧುಮಿತ್ರರೊಡನೆ ಹೊರಟನು. ಮದುವೆಯ ಹೆಣ್ಣೂ ಮಾನವಾಗಿ ಅವರ ಜೊತೆಯಲ್ಲಿ ಹೊರಟಿತು. ದಿಬ್ಬಣದವರು ಸಂತೋಷವಾಗಿ ಹೊರಟರು.

ಅವರಿಗೆ ದಾರಿಯಲ್ಲಿ ಎಲ್ಲವೂ ಸುಖವಾಗಿತ್ತು. ಅಪಹಾಸ್ಯದ ಕಾಡಿಗೆ ಬಂದರು. ಅಲ್ಲಿ ಅವರಿಗೆ ಮರಗಳ ಎಲೆಗಳ ಮರ್ಮರವಲ್ಲದೆ ಇನ್ನು ಯಾವ ಸದ್ದೂ ಕೇಳಲಿಲ್ಲ. ಆ ವಿಚಿತ್ರ ಪುರುಷನೂ ಎದುರಿಗೆ ಬರಲಿಲ್ಲ. ಆದರೆ ಕೊಟ್ಟಕೊನೆಯಲ್ಲಿ ಒಂದು ಪುಟ್ಟಿಲಿಯು ಪುಣಕ್ಕನೆ ಬಂದು, "ಅಕ್ಕಾ! ನಾನು ನಿನಗೆ ದಾರಿ ತೋರಿಸಲೆ?" ಎಂದು ಕೇಳಿತು.

ಜನ್ಯಾನಿಯು ಅದನ್ನು ಆದರಿಸಿ "ನಿನ್ನ ಸಂತೋಷ!" ಎಂದಳು. ಇಲಿಯು ಅವರನ್ನೆಲ್ಲ ದಾರಿಯು ಎರಡಾಗಿ ಒಡೆದಿದ್ದ ಕಡೆಗೆ ಕರೆದುಕೊಂಡು ಬಂದುಬಿಟ್ಟು ತಾನು ಮರೆಯಾಯಿತು. ಅಲ್ಲಿ ಕುಳಿತಿದ್ದ ಮುದುಕಿಯು "ನೀವು ಎಡಕ್ಕೆ ಹೋಗಿ" ಎಂದು ಹೇಳಿದಳು. ಆ ಹಾದಿಯಲ್ಲಿ ಬಂದರ್ಧಮೈಲಿ ಹೋದಾಗ, ಅವಳಿಗೆ ಒಬ್ಬ ಹುಡುಗಿಯು ಕಾಣಿಸಿಕೊಂಡು "ನೀನು ಯಾರು? ಯಾಕೆ ಬಂದೆ?" ಎಂದು ವಿಚಾರಿಸಿದಳು. ಜನ್ಯಾನಿಯು "ಈ ಮುಂದಿನೂರಿನ ಅರಸನನ್ನು ಮದುವೆಯಾಗುವುದಕ್ಕೆ ಬಂದಿದ್ದೇನೆ" ಎಂದು ವಿನಯವಾಗಿ ಹೇಳಿದಳು. ಅವಳು ಇವಳ ವಿನಯಕ್ಕೆ ಸಂತೋಷ ಪಟ್ಟು, "ಆ ಅರಸನ ತಂಗಿ ನಾನು. ನಮ್ಮ ಅಣ್ಣನ ಗುಟ್ಟು ಒಂದಿದೆ. ಕೇಳಿರು. ಅವನು ನೋಡುವುದಕ್ಕೆ ಕ್ರೂರವಾಗಿ ಕಂಡರೂ, ಅವನು ತನಗೆ ಬೇಕಾದವರನ್ನು ಏನೂ ಮಾಡುವುದಿಲ್ಲ. ನೀನು ಹೆದರಬೇಕಾಗಿಲ್ಲ. ಸಂತೋಷವಾಗಿ ನಿನ್ನ ಬಳಗದವರೊಡನೆ ಅವನ ಮನೆಗೆ ಹೋಗು. ಅಲ್ಲಿ ನಮ್ಮ ತಾಯಿಯು ಬೀಸುವುದಕ್ಕೆ ಕಾಳುಕೊಡುವಳು. ಅದನ್ನು ನಯ ವಾಗಿ ಬೀಸಿ, ನಾಜೋಕಾಗಿ ರೊಟ್ಟಿ ಮಾಡು. ನಿನ್ನ ರೊಟ್ಟಿ ರುಚಿಯಾ ಗಿದ್ದರೆ, ನಮ್ಮ ಅಣ್ಣನು ನಿನ್ನನ್ನು ವಿಶ್ವಾಸವಾಗಿ ನೋಡುವನು" ಎಂದು ಹೇಳಿ ಅವಳನ್ನು ಬೀಳ್ಕೊಂಡು ಹೋದಳು.

ತಂದೆಯು ಎಲ್ಲವನ್ನೂ ಕೇಳಿ ಸಂತೋಷಪಟ್ಟು ಮಗಳನ್ನು ಮದು ವಣಿಗನ ಮನೆಗೆ ಕರೆದುಕೊಂಡು ಹೋದನು. ವರನ ತಾಯಿಯು ತನ್ನ ಸೊಸೆಯಾಗುವ ಸೌಭಾಗ್ಯವತಿಯು ಬಂದಾಳೇ ಎಂದು ಬಾಗಿಲಲ್ಲಿಯೇ ಕಾದಿದ್ದಳು. ಅವಳು ವಧುವಿಗೆ ಧಾನ್ಯವನ್ನು ಕೊಟ್ಟು ಅವಳನ್ನು ಆ ಮನೆ ಯಲ್ಲಿ ಬಿಟ್ಟು ತಾನು ಬೀಳ್ಕೊಂಡಳು.

ಜನ್ಯಾನಿಯು ಬೀಸುವುದನ್ನೂ ಸುಡುವುದನ್ನೂ ಚೆನ್ನಾಗಿ ಕಲಿತಿ ದ್ದಳು. ಅವಳಿಗೆ ಕಾಳು ಬೀಸುವುದೂ ರೊಟ್ಟಿ ಸುಡುವುದೂ ಕಷ್ಟವಾಗ ಲಿಲ್ಲ. ಅವಳು ರೊಟ್ಟಿ ಸುಡುತ್ತಿದ್ದರೆ ಸುತ್ತಮುತ್ತಿನ ಮನೆಗಳವರ ಮೂಗು

ಯುದ್ಧಕ್ಕೆ ಬಂದನು. ಹುಡುಗ ಅರಸನು ಎಡದ ಕೊಂಬನ್ನು ಹೊಡೆದು ಭೂತವನ್ನು ಕರೆದನು. ಅದು ಬಂದು ಇಬ್ಬರು ಅರಸರಿಗೂ ಸ್ನೇಹ ಮಾಡಿಸಿತು. ಹಳೆಯ ಅರಸನ ಮಗಳನ್ನು ಹೊಸ ಅರಸನಿಗೆ ಕೊಡಿಸಿ ಮದುವೆ ಮಾಡಿಸಿ "ಇಬ್ಬರೂ ಸುಖವಾಗಿರಿ" ಎಂದು ಹೇಳಿ ತನ್ನ ಪಾಡಿಗೆ ತಾನು ಹೋಯಿತು.

---

# ಪತಿವ್ರತೆ

ಮರ್ರೈಲೇಸ್ ಹಿರಿಯ ಪಾಳೆಯಗಾರ. ಅವನಿಗೆ ಹಲವರು ಹೆಂಡಿರು. ಆದರೆ ಅವರೆಲ್ಲರಲ್ಲಾ ಲೈಲೈ ಮೇಲೆ ಅವನಿಗೆ ಬಹಳ ಪ್ರೇಮ. ಅವಳು ಎಲ್ಲರಿಗಿಂತ ರೂಪವಂತೆ; ಗುಣವಂತೆ. ಅವಳು ಮಾತನಾಡಿದರೆ ಹೊಳೆಯ ನೀರು ಕಿಲಕಿಲನೆ ಹರಿದಂತಾಗುವುದು, ಅವಳು ಹಾಡಿದರೆ ಹಕ್ಕಿಗಳ ಹಾಡಿ ನಂತಿರುವುದು.

ಪಾಳೆಯಗಾರನಿಗೆ ಸಂಗೀತದಮೇಲೆ ಬಹಳ ವಿಶ್ವಾಸ. ಅದರಿಂದ, ಎಲ್ಲೆಲ್ಲೋ ತಿರುಗಿ ಒಂದು ಮಾಯದ ವೀಣೆಯನ್ನು ಸಂಪಾದಿಸಿಕೊಂಡು ಬಂದಿದ್ದನು. ಅದನ್ನು ಅವನು ತನ್ನ ಮುಂದಿಟ್ಟುಕೊಂಡು 'ಹಾಡು ವೀಣೆ!' ಎಂದರೆ ಹಾಡುವುದಕ್ಕೆ ಮೊದಲು ಮಾಡಿ, ದಿವ್ಯ ಗಾನವನ್ನು ಕೇಳಿಸುವುದು. ಆ ವೀಣೆಯನ್ನು ನೋಡಿದವರೂ ಅದರ ಹಾಡನ್ನು ಕೇಳಿದವರೂ "ಈ ವೀಣೆಯನ್ನು ಮನುಷ್ಯ ಮಾತ್ರದವರು ಮಾಡಿಲ್ಲ. ಇದೆಲ್ಲೋ ದೇವ ಲೋಕದ ವೀಣೆಯಿರಬೇಕು. ಹೇಗೆ ಹೇಗೋ ಈ ಲೋಕಕ್ಕೆ ಬಂದು ಬಿಟ್ಟಿದೆ" ಎನ್ನುವರು. ಪಾಳೆಯಗಾರನು ಪ್ರೇಮಪಾತ್ರಳಾದ ಲೈಲೈಯ ಗುಡಿಸಿಲಿನಲ್ಲಿ ಅದನ್ನು ಇಟ್ಟಿದ್ದನು. ಇನ್ನೆಲ್ಲರಿಗಿಂತ ಲೈಲೈಮೇಲೆ ಪ್ರೇಮ, ವೀಣೆಯಮೇಲೆ ಅವಳಿಗಿಂತ ಪ್ರೇಮ. "ಅದನ್ನು ಅಲ್ಲಾಡಿಸಕೂಡದು,

ಇಟ್ಟಕಡೆಯಿಂದ ತೆಗೆಯಕೂಡದು, ಯಾರೂ ಮುಟ್ಟದಂತೆ ನೋಡಿಕೋ'' ಎಂದು ಕಟ್ಟಪ್ಪಣೆ ಮಾಡಿ ಅವನು ಹೊರಗೆ ಹೋಗುವನು.

ಆ ಊರಿನ ಹೆಂಗುಸರಿಗೆಲ್ಲ ಆ ಮಾಯದ ವೀಣೆ ನೋಡಬೇಕು. ಅದರಲ್ಲೇನಿದೆಯೋ ಅದು ಹೇಗೆ ಅಷ್ಟು ಚೆನ್ನಾಗಿ ನುಡಿಯುವುದೋ ನೋಡಬೇಕು ಎಂದು ಆಶೆ. ಅವರು "ನಾವು ಧರಿಸಿರುವ ಹಿತ್ತಾಳೆಯ ಒಡವೆಗಳನ್ನೆಲ್ಲ ನಿನಗೇ ಕೊಟ್ಟುಬಿಡುತ್ತೇವೆ. ಆ ವೀಣೆ ಒಂದು ಸಲ ತೋರಿಸು ಮತ್ತೆ!'' ಎಂದು ಎಷ್ಟೋ ಕೇಳಿಕೊಂಡರು, ಆದರೂ ಅವಳು ಒಪ್ಪಲಿಲ್ಲ.

ಒಂದು ದಿನ ಹುಣ್ಣಿಮೆ. ತುಂಬು ಚಂದ್ರನು ಹಾಲಿನಂತಹ ಬೆಳ ದಿಂಗಳು ಚೆಲ್ಲಿ ಎಲ್ಲವನ್ನೂ ಸುಖಮಯವನ್ನಾಗಿ ಮಾಡಿದ್ದಾನೆ. ಆ ದಿನ ಪಾಳೆಯಗಾರನು ತನ್ನ ಕುರಿ ಮಂದೆಯನ್ನು ನೋಡಿಕೊಂಡು ಬರುವು ದಕ್ಕಾಗಿ ಕಾಡಿಗೆ ಹೋಗಿದ್ದವನು ಇನ್ನೂ ಬಂದಿಲ್ಲ. ಲೈಲೈಗೆ ಒಬ್ಬಳೇ ಇರುವುದಕ್ಕೆ ಬೇಸರವಾಯಿತು. ಊರಿನ ಹೆಂಗುಸರನ್ನೆಲ್ಲ ಕರೆಸಿದಳು. ಅವರು ಅಷ್ಟು ಆಶೆ ತೋರಿಸಿದರೂ ಸೋಲದಿದ್ದವಳು ತನ್ನ ಬೇಸರದಲ್ಲಿ ಮನಸೋತು ಗೋಡೆಯ ಮೇಲೆ ಇಟ್ಟಿದ್ದ ವೀಣೆಯನ್ನು ತೆಗೆದು ಕೆಳಗೆ ಇಟ್ಟು "ಹಾಡು ವೀಣೆ!'' ಎಂದು ವಿನಯದಿಂದ ಕೇಳಿದಳು.

ವೀಣೆಯು ಹಾಡಿತು. ಮೃದುವಾಗಿ ಮಧುರವಾಗಿ ಮೊದಲಾದ ಹಾಡು ಬರು ಬರುತ್ತ ದೊಡ್ಡದಾಯಿತು. ಗುಡಿಸಲು ತುಂಬಿತು. ಬೀದಿಯು ತುಂಬಿತು. ಕೇರಿಯು ತುಂಬಿತು. ಊರೆಲ್ಲ ತುಂಬಿ, ಸುತ್ತ ಮುತ್ತಲಿನ ಹಳ್ಳ ಕೊಳ್ಳ ಬೆಟ್ಟ ಕಾಡು ಎಲ್ಲವೂ ಹಾಡೇ ಹಾಡಾಗಿ ಹೋಯಿತು.

ಅಷ್ಟು ಹೊತ್ತೂ ಯಾರಿಗೂ ಮೈಮೇಲೆ ಅರಿವೇ ಇಲ್ಲ. ಅಷ್ಟು ಮೈಮರೆತು ಕೇಳುತ್ತಿದ್ದರು. ಈ ಹಾಡನ್ನು ದೂರದ ಕಾಡಿನಲ್ಲಿದ್ದ ಪಾಳೆಯಗಾರನೂ ಕೇಳಿದನು. ಕೂಡಲೇ ಅವನಿಗೆ ಮೈಯುರಿಯು ವಂತಹ ಕೋಪವು ಬಂತು. "ಎಲಾ! ಎಲಾ! ನಾನು ಬೇಡವೆಂದರೂ

ಈ ಲೈಲೈ ಎಂತಹ ಕೆಲಸ ಮಾಡಿದಳು ನೋಡಿದೆಯಾ?" ಎಂದು ಆರ್ಭಟಿಸಿ ಎದ್ದನು.

ಆ ಆರ್ಭಟವು ಊರಿಗೆಲ್ಲ ಕೇಳಿಸಿತು. ಸಂಗೀತದಲ್ಲಿ ಮುಳುಗಿದ್ದ ಹೆಂಗುಸರು, ತಟ್ಟನೆ ಪಾಳೆಯಗಾರನನ್ನೂ ಅವನ ಅತಿಶಯವಾದ ಕೋಪವನ್ನೂ ನೆನೆದು ನಡುಗಿದರು. ಇದ್ದವರು ಇದ್ದ ಹಾಗೆ ಎದ್ದು ಎಡವುವುದೂ ಬೀಳುವುದೂ ಕಾಣದೆ ಓಡಿದರು. ಲೈಲೈಯು ಗಂಡನ ಮಾತು ನೆನೆದು ನಡುಗಿದಳು. ನಡುಗುತ್ತಲೇ ವೀಣೆಯನ್ನು ತೆಗೆದು ಗೋಡೆಯಮೇಲೆ ಇಟ್ಟಳು. ಇವಳು ಕೈಬಿಡುತ್ತಿದ್ದ ಹಾಗೆಯೇ ಅದು ಕೆಳಕ್ಕೆ ಬಿತ್ತು: ಚಿಪ್ಪಾ ಚೂರಾಗಿ ಹೋಯಿತು.

ಅವಳಿಗೆ ಏನು ಮಾಡುವುದಕ್ಕೂ ತೋರಲಿಲ್ಲ. "ಗಂಡನು ಬಂದರೇನು ಗತಿ?" ಎಂದು ಬೆದರಿ ಬೆಂದ ಸೊಪ್ಪಿನಂತಾಗಿ ಹೋದಳು. ಕಣ್ಣು ಕತ್ತಲೆ ಹಿಡಿಯಿತು. ಬುದ್ಧಿ ಮೊಂಕಾಯಿತು. ಏನೂ ತೋರದೆ, ಗಂಡನಿಗೆ ಮೊಕ ತೋರಿಸಲಾರದೆ, ಎಲ್ಲರೂ ಓಡಿದ ಹಾಗೆ ತಾನೂ ಓಡಿದಳು. ಆದರೆ, ಎಲ್ಲಿಗೆ ಹೋಗಬೇಕು? ಇದ್ದಕ್ಕಿದ್ದ ಹಾಗೇ ಕಾಲು ತವರುಮನೆಯ ಕಡೆಗೆ ತಿರುಗಿತು. ಅವಳ ಗಂಡನ ಮನೆಯಿದ್ದುದು ಬೆಟ್ಟದಮೇಲೆ. ಕೆಳಗೆ ಕಿಬ್ಬದಿಯಲ್ಲಿ ತವರುಮನೆ. ಬೀಳುವುದೂ ಏಳುವುದೂ ಕಾಣದೆ ಓಡೋಡಿ ತಾಯಿಮನೆಗೆ ಬಂದಳು.

ಪಾಳೆಯಗಾರನು ಮನೆಗೆ ಬಂದನು. ವೀಣೆಯು ಹಾಡುತ್ತಿರುವಾಗ ನನ್ನ ಅಪ್ಪಣೆಯಿಲ್ಲದೆ ಹಾಡಿಸಿದರಲ್ಲ ಎಂದು ಬಂದಿದ್ದ ಕೋಪವು ಒಡೆದು ಬಿದ್ದಿದ್ದ ವೀಣೆಯನ್ನು ಕಂಡಾಗ ಒಂದಕ್ಕೆ ಹತ್ತರಷ್ಟಾಯಿತು. ಆ ಕೋಪದಲ್ಲಿ "ಈ ವೀಣೆಯನ್ನು ಒಡೆದವರ ತಲೆಯನ್ನೂ ಒಡೆಯುವೆನು" ಎಂದು ಕ್ರೂರವಾಗಿ ಆಣೆಯಿಟ್ಟುಕೊಂಡನು.

ಊರ ಹೆಂಗುಸರನ್ನೆಲ್ಲ ಕರೆಯಿಸಿ ವಿಚಾರಿಸಲಾಗಿ ಒಡೆದವರು ಯಾರು ಎನ್ನುವುದು ತಿಳಿಯಿತು. ಕೂಡಲೇ ತನ್ನ ಕಡೆಯವರನ್ನು ಕರೆದು

"ಹೋಗಿ ಲೈಲೈಯನ್ನು ಈ ಕೂಡಲೇ ಬರಹೇಳಿ. ನನ್ನ ಅಪ್ಪಣೆಯೆಂದು ಹೇಳಿ. ಬಂದರೆ ಸರಿ, ಬರದಿದ್ದರೆ ಮುಂದಲೆ ಹಿಡಿದು ಎಳೆದು ತನ್ನಿ" ಎಂದು ಅಪ್ಪಣೆ ಮಾಡಿದನು. ಒಡೆಯನ ಅಪ್ಪಣೆಯೆಂದು ಆಳುಗಳು ಓಡಿದರು.

ಲೈಲೈ ಬರುವುದಕ್ಕೆ ಹಿಂದೆಗೆಯಲಿಲ್ಲ. ತಾಯಿತಂದೆಗಳು "ಆ ಉಗ್ರಕೋಪದ ಗಂಡನೆದುರಿಗೆ ಹೇಗೆ ಹೋಗಿ ನಿಲ್ಲುವೆಯಮ್ಮಾ!" ಎಂದು ಕಣ್ಣೀರು ಕರೆದರು. "ಹಣೆಯ ಬರೆಹವಿದ್ದ ಹಾಗೆ ಆಗಲಿ" ಎಂದು ಮಡದಿಯು ಹೊರಟಳು. ಒಂದು ಕಬ್ಬಿಣದ ಕೋಲನ್ನು ಊರಿಕೊಂಡು ಬೆಟ್ಟವನ್ನು ಹತ್ತಿ ನಡೆದಳು.

ಆಳುಗಳು ಮುಂದೆ ಹೋಗಿ ಅವಳು ಬರುತ್ತಿರುವುದನ್ನು ತಿಳಿಯಿಸಿದರು. ಒಡೆಯನು ತನ್ನನ್ನು ಸುಡುತ್ತಿರುವ ಕೋಪದಲ್ಲಿ ಏನು ಮಾಡುತ್ತಿರುವೆನೆಂಬುದನ್ನು ಅರಿಯದೆ, "ದಾರಿಯಲ್ಲೇ ಅವಳನ್ನು ಕಲ್ಲು ಹೊಡೆದು ಕೊಂದು ಬಿಡಿ" ಎಂದು ಕಠೋರವಾದ ಅಪ್ಪಣೆ ಮಾಡಿದನು. ಆಳುಗಳು ಅವನ ಅಪ್ಪಣೆಯನ್ನು ಮೀರಲಾರದೆ ಹೊರಟರು.

ಆ ವೇಳೆಗೆ ಲೈಲೈಯು ಅರ್ಧ ಬೆಟ್ಟ ಹತ್ತಿ ಬಂದಿದ್ದಳು. ಪಾಳೆಯಗಾರನ ಕಡೆಯವರು ಒಂದು ಕಲ್ಲು ಹೊಡೆಯಲು ಆರಂಭಿಸಿದರು. ಅವಳು ಗಾಬರಿ ಬಿದ್ದು ಓಡಿದಳು. ಕಲ್ಲಿನೇಟು ತಪ್ಪಿಸಿಕೊಳ್ಳುವ ಭರದಲ್ಲಿ ಕಾಲು ಜಾರಿತು. ಕಮರಿಗೆ ಬಿದ್ದಳು.. ಆಳುಗಳು ಹೋಗಿ "ಲೈಲೈ ಕಮರಿಗೆ ಬಿದ್ದು ಸತ್ತುಹೋದಳು" ಎಂದು ಒಡೆಯನಿಗೆ ತಿಳಿಸಿದರು. ಇನ್ನೂ ಕೋಪವಿಳಿಯದಿದ್ದ ಆ ನಿಡುಕನು "ಸಾಯಲಿ" ಎಂದು ಸುಮ್ಮನಾದನು.

ಇತ್ತ ಕಮರಿಗೆ ಬಿದ್ದ ಈ ಹೆಣ್ಣಿಗೆ ಗಾಯದಮೇಲೆ ಗಾಯವಾಗಿ ಮೈಮೇಲಿನ ಅರಿವು ಉಳಿಯದೆ ಅಳಿಯಿತು. ಹಾಗೆಯೇ ಮೈಮೇಲೆ ಜ್ಞಾನವಿಲ್ಲದೆ ಒಂದು ದಿನವೆಲ್ಲ ಬಿದ್ದಿದ್ದಳು. ಆ ಮೇಲೆ ಎಚ್ಚರಗೊಂಡು, "ತಾನು ಏಕಾದರೂ ಆ ವೀಣೆಯನ್ನು ಮುಟ್ಟಿದೆನೋ? ಗಂಡನ ಅಪ್ಪಣೆಯನ್ನು ಮೀರಿದುದಕ್ಕೆ ತಕ್ಕ ಪ್ರಾಯಶ್ಚಿತ್ತವಾಯಿತು' ಎಂದುಕೊಂಡು

ಗಾಯದ ನೋವಿನಿಂದ ಬಾಧೆಪಡುತ್ತ ಬಹು ಕಷ್ಟದಿಂದ ತಾಯಮನೆಗೆ ಬಂದು ಸೇರಿದಳು.

ತಾಯಿಯು ಮಗಳ ಅವಸ್ಥೆಯನ್ನು ನೋಡಿ ಬಲು ಮರುಕಪಟ್ಟು, ಗಾಯಗಳಿಗೆಲ್ಲ ಸೊಪ್ಪು ಅರೆದು ಮೆತ್ತಿ, ಮೆತ್ತನೆಯ ಚಿಗುರು ತಂದು ಹಾಸಿ ಮಲಗಿಸಿದಳು. ತಾಯಿಯ ಉಪಚಾರದಿಂದ ಎರಡುಮೂರು ತಿಂಗಳಲ್ಲಿ ಗುಣವಾಯಿತು. ಅವಳು ಹಾಸಿಗೆ ಹಿಡಿದು ಮಲಗಿದ್ದಾಗ ಆಗಾಗ ಕನವರಿಸಿಕೊಳ್ಳುವಳು. ಗಂಡನು ಬಂದಂತಾಗಿ "ನನ್ನ ತಪ್ಪು ಮನ್ನಿಸು. ನಾನು ನಿನ್ನ ದಾಸಿ. ನನ್ನ ತಪ್ಪು ನೀನು ಮನ್ನಿಸದಿದ್ದರೆ ಇನ್ನು ಯಾರು ಮನ್ನಿಸುವರು?" ಎಂದು ಅನೇಕ ವಿಧವಾಗಿ ಹಂಬಲಿಸುವಳು. ಅದನ್ನು ಕೇಳಿದವರೆಲ್ಲ "ನೋಡಿದೆಯಾ! ಇವಳಿಗೆ ಗಂಡನಮೇಲೆ ಎಷ್ಟು ಪ್ರೇಮ! ಅವನು ಕಲ್ಲಿನಿಂದ ಹೊಡೆಸಿದರೂ ಅವನ ಮೇಲೆ ಇವಳಿಗೆ ಕೋಪವಿಲ್ಲವಲ್ಲ" ಎಂದು ಆಶ್ಚರ್ಯಪಡುವರು.

ಕೊನೆಗೆ ಗಾಯಗಳೆಲ್ಲ ಮಾದು ಕಲೆಗಳೂ ಸಿಲ್ಲದೆ ಮಾಯವಾದುವು. ಲೈಲೈಯು ಹುಣ್ಣಿಮೆಯ ಚಂದ್ರನಂತೆ ಬೆಳಗಿದಳು. ಎದ್ದು ಚೆನ್ನಾಗಿ ಓಡಾಡುವುದಕ್ಕೆ ಶಕ್ತಿ ಬರುತ್ತಲೂ "ಅಮ್ಮಾ! ನಾನು ಗಂಡನ ಮನೆಗೆ ಹೊರಡುತ್ತೇನೆ" ಎಂದಳು. ಮಗಳ ಮನಸ್ಸು ತಿಳಿದಿದ್ದ ತಾಯಿಯು ಅವಳನ್ನು ಬೇಡವೆನ್ನಲಿಲ್ಲ. ಅವಳ ಒಡವೆಗಳ ಜೊತೆಗೆ ಇನ್ನೂ ಅಷ್ಟು ಒಡವೆಗಳನ್ನಿಟ್ಟು ಅವಳ ಜೊತೆಯಲ್ಲಿ ಹೋಗುವುದಕ್ಕೆ ಅಷ್ಟುಜನ ಹೆಂಗಸರನ್ನು ಹವಣಿಸಿ ಕೊಟ್ಟು ಕಳುಹಿಸಿದಳು.

ಲೈಲೈ ಬರುತ್ತಿರುವುದು ಮರ್ರೈಲೈನನಿಗೆ ತಿಳಿಯಿತು. ಆ ವೇಳೆಗೆ ಅವನ ಕೋಪವೆಲ್ಲ ಮಾಯವಾಗಿ ಹೆಂಡತಿಯ ಮೇಲಿನ ಪ್ರೀತಿಯು ಮೂಡಿತ್ತು. ಅಂತಹ ಮಡದಿಗೆ ಇಂತಹ ಶಿಕ್ಷೆ ವಿಧಿಸಿದೆನಲ್ಲ ಎಂದು ಅವನೂ ಕೊರಗುತ್ತಿದ್ದನು. ಅವಳು ಸತ್ತುಹೋದಳೆಂದು ಒಳಗೇ ಅಳುತ್ತಿದ್ದ ಗಂಡನು, ಅವಳು ಬದುಕಿದ್ದಾಳೆ, ಬರುತ್ತಿದ್ದಾಳೆ ಎಂದು ಕೇಳಿ ಬಹಳ ಆಶ್ಚರ್ಯಪಟ್ಟು,

ಮೊದಮೊದಲು ನಂಬಲಾರದೆ ಹೋದನು. ಕೊನೆಗೆ ಹಲವರು ಬಂದು ಹೇಳಿದ ಮೇಲೆ ಅವಳನ್ನು ಎದುರುಗೊಳ್ಳಲು ಹೋದನು.

ಗಂಡನನ್ನು ಕಾಣುತ್ತಲೂ ಲೈಲೈ ಕಣ್ಣು ತುಂಬ ನೀರಿಟ್ಟುಕೊಂಡು "ನನ್ನ ತಪ್ಪು ಮನ್ನಿಸು. ನಾನು ನಿನ್ನ ಅಪ್ಪಣೆ ಮೀರಬಾರದಾಗಿತ್ತು" ಎಂದು ಅವನ ಕಾಲಿಗೆ ಬಿದ್ದಳು. ಒಳ್ಳೆಯ ತುಂಬುಚಂದ್ರನ ಹಾಗೆ, ಹೊಸ ಮದುವೆಯ ಹೆಣ್ಣಿನ ಹಾಗೆ, ಮೆರೆಯುತ್ತಿದ್ದ ಹೆಂಡತಿಯನ್ನು ಕಂಡು ಗಂಡನು ಬಿಕ್ಕಳಿಸಿ ಬಿಕ್ಕಳಿಸಿ ಅಳುತ್ತಾ "ನಾನು ಕೋಪದಲ್ಲಿ ನಿನಗೆ ಶಿಕ್ಷೆ ವಿಧಿಸಿದೆ. ಮನ್ನಿಸು" ಎಂದು ಹೆಂಡತಿಯ ಕಾಲನ್ನು ಹಿಡಿದುಕೊಂಡನು.

ಹೀಗೆ ಆ ಗುಣವಂತೆಯನ್ನು ಉಪಚರಿಸಿ ಗುಡಿಸಲಿಗೆ ಕರೆದುಕೊಂಡು ಬರುವ ವೇಳೆಗೆ ಅಲ್ಲಿಯೇ ಬಿದ್ದಿದ್ದ ವೀಣೆಯು "ಮಂಗರವಾಯು"ದಿಂದ ಸರಿಹೋಗಿತ್ತು: ಯಾರೂ ಕೋರದಿದ್ದರೂ ಅದು ತಾನಾಗಿ ಮತ್ತೆ ಮೊದಲಿನಂತೆ ಮಧುರವಾಗಿ ಮಂಗಳವಾಗಿ ಹಾಡಿತು.

---

## ಹಳೆಯ ಗಂಡ

ಈಜಿಪ್ಟಿನಲ್ಲಿ ಅಣ್ಣತಮ್ಮಂದಿರು ಇಬ್ಬರು ಇದ್ದರು. ಅಣ್ಣನಿಗೆ ತಮ್ಮನನ್ನು ಕಂಡರೆ ಬಲು ಪ್ರೇಮ. ಅಣ್ಣನಿಗೆ ಮನೆ ಬಾಗಿಲು, ಹೊಲ ಗದ್ದೆ, ತೋಟ, ಒಂದು ಹಿಂಡು ಹಸುಗಳು, ಒಂದು ಮಂದೆ ಕುರಿ ಎಲ್ಲವೂ ಇದ್ದುವು. ತಮ್ಮ ಅಣ್ಣನ ಬಳಿ ಜೀತಕ್ಕಿದ್ದನು.

ಅಣ್ಣನ ಹೆಂಡತಿಗೆ ಆ ತಮ್ಮನನ್ನು ಕಂಡರೆ ಆಗದು. ತಮ್ಮ ಬಹಳ ಬುದ್ಧಿವಂತ. ಕಾಳು ಕಡ್ಡಿ, ಗೋಡು ಗೊಬ್ಬರ, ಉಳುಮೆ ಬಿತ್ತನೆ, ಕಳೆ ಕೀಳುವುದು, ನೀರು ಹಾಯಿಸುವುದು, ಪೈರು ಕಟಾವು, ಕಣ ಎಲ್ಲ ಕೆಲಸವನ್ನೂ ಬಲ್ಲ. ಹಸು ಕುರಿಗಳಿಗೆ ಎಂಥಾ ರೋಗ ಬಂದರೂ ಮದ್ದು ಮಾಡಿ

ಗುಣ ಮಾಡಬಲ್ಲ. ಅವನನ್ನು ಕಂಡರೆ ಊರಿನವರಿಗೆಲ್ಲ ಅಕ್ಕರೆ. ಅದರಿಂದ ಅತ್ತಿಗೆಗೆ ಮೈದುನನ ತಲೆ ಕಂಡರೆ ಆಗದು. ತನ್ನ ಗಂಡನ ಕೈಕೆಳಗೆ ಕೂಲಿ ಮಾಡುವವನಿಗೆ ಇಷ್ಟು ಹೆಸರು ಬಂದರೆ ಅವಳು ಸೈರಿಸುವುದೆಂತು?

ಕೊನೆಗೆ ಬಿಟೂಗೆ—ಅದೇ ತಮ್ಮನ ಹೆಸರು—ತಕ್ಕ ಶಿಕ್ಷೆ ಮಾಡಿಸಬೇಕು ಎಂದುಕೊಂಡಳು. ಒಂದು ದಿನ ಬಿತ್ತನೆಗೆ ಕಾಳು ಬೇಕು ಎಂದು ಬಿಟೂ ಅತ್ತಿಗೆಯನ್ನು ಕೇಳುವುದಕ್ಕೆ ಹೋದನು. ಅವಳು ಕಾಳು ಮುಚ್ಚಿಟ್ಟು ಅವನನ್ನು ಚೆನ್ನಾಗಿ ಬೈದು ಕಳುಹಿಸಿದಳು.

ಅಣೂಪನು—ಅದು ಅಣ್ಣನ ಹೆಸರು—ಕಾಳು ತರುವುದಕ್ಕೆ ತಾನೇ ಬಂದನು. ಅವನು ಬರುತ್ತಿದ್ದುದನ್ನು ಕಂಡು ಈ ಮಂಥರೆಯು ತಲೆ ಕೆದರಿಕೊಂಡು ಮೊಕ ಪರಚಿಕೊಂಡು ನೆಲದಮೇಲೆ ಅಳುತ್ತ ಬಿದ್ದಿದ್ದಳು. ಅವನು ಬಂದು ಏನು ಎಂದು ಕೇಳುತ್ತಲೂ "ನಿಮ್ಮ ತಮ್ಮ ನನ್ನ ಬೈದ, ಹೊಡೆದ, ನೆಲದಮೇಲೆ ನೂಕಿ, ಒದ್ದು, ಹೋದ" ಎಂದು ಹೇಳಿ ಹೋ ಎಂದು ಅತ್ತುಬಿಟ್ಟಳು.

ಗಂಡನಿಗೆ ಕೋಪ ಬಂದು ತಮ್ಮನಿಗೆ ಬುದ್ಧಿ ಕಲಿಸಬೇಕು ಎಂದುಕೊಂಡು ಅವನನ್ನು ಹುಡುಕಿಕೊಂಡು ಹೊರಟನು. ತಮ್ಮನು "ಅಣ್ಣಾ! ಅತ್ತಿಗೆಗೆ ಮೊದಲಿಂದಲೂ ನನ್ನ ಕಂಡರೆ ಆಗದು. ಇನ್ನು ನಾನು ಇಲ್ಲಿರುವುದಿಲ್ಲ. ಇನ್ನು ಯಾವುದಾದರೂ ದೇಶಕ್ಕೆ ಹೋಗಿ ಒದುಕಿಕೊಳ್ಳುತ್ತೇನೆ. ಅಲ್ಲಿ ನನಗೇನೂ ಕೆಟ್ಟದ್ದು ಆಗದ ಹಾಗೆ ನನ್ನ ಜೀವ ತೆಗೆದು ಇಲ್ಲಿ ಈ ಅಕೇಷಿಯಾ ಮರದಮೇಲೆ ಇಟ್ಟಿರುತ್ತೇನೆ. ನನಗೇನಾದರೂ ಕೇಡಾದರೆ ಈ ಮರ ಉರುಳಿಬೀಳುತ್ತದೆ. ಅದರ ಮೇಲಿಟ್ಟಿರುವ ನನ್ನ ಜೀವ ತಂದು ನನ್ನನ್ನು ಬದುಕಿಸಿಕೊ" ಎಂದನು.

ಅಣ್ಣನಿಗೆ ತಮ್ಮನ ಮೇಲಿದ್ದ ಕೋಪವೆಲ್ಲ ಇಳಿಯಿತು. ಏನುಮಾಡಬೇಕು ಎನ್ನುವುದೇ ತೋರದೇ ಹೋಯಿತು. ತಮ್ಮನ ಮೇಲೆ ಆಸೆ, ಹೆಂಡತಿಯಮೇಲೆ ಇಷ್ಟ, ಆಗಿ ಒದ್ದಾಡಿದನು. ಕೊನೆಗೆ ತಮ್ಮನು ದೇಶಾಂತರ

ಹೋಗಿ ಬದುಕಿಕೊಳ್ಳಲೆಂದುಕೊಂಡು, "ಹಾಗೆ ಆಗಲಿ. ಹೋಗಿ ಬಾ. ನಿನಗೆ ಒಳ್ಳೆಯದಾಗಲಿ" ಎಂದು ಹೇಳಿ ಕಳುಹಿಸಿದನು.

ಬಿಟೂ ಅಕೇಷಿಯಾ ದೇಶಕ್ಕೆ ಹೋದನು. ಅಲ್ಲಿ ಬೇಸಾಯ ಮಾಡುವನು. ಬೇಟೆಯಾಡುವನು. ಎಲ್ಲಿ ಅಂದರೆ ಅಲ್ಲಿ ಸುಖವಾಗಿರುವನು. ಹೀಗೆ ಸುಖವಾಗಿದ್ದಾಗ, ಅವನಿಗೆ ಮದುವೆಯು ಆಯಿತು. ಒಬ್ಬ ದೇವಕನ್ಯೆಯು ಅವನ ರೂಪವನ್ನು ಕಂಡು ಒಲಿದು ಅವನನ್ನು ಮದುವೆಯಾದಳು.

ಗಂಡಹೆಂಡಿರು ಅಷ್ಟುದಿನ ಸುಖವಾಗಿದ್ದರು. ಆದರೇನು? ಬಿಟೂ ಹೆಂಡತಿಯು ದೇವಕನ್ಯೆಯಾದರೂ ಅವಳ ಬುದ್ಧಿ ಮಾತ್ರ ಮನುಷ್ಯರ ಹೆಂಗುಸರಿಗಿಂತ ಕೀಳು. ಅವನಿಗೆ ಅತ್ತಿಗೆಯೇ ವಾಸಿ ಅನ್ನಿಸಿತು. ಗಂಡನ ತಲೆಗೆ ಚಿಟ್ಟು ಹಿಡಿಸಿದಳು.

ಬಿಟೂ ಹೆಂಡತಿಯು ಬಲು ಚಲುವೆ. ಅವಳ ಚೆಲುವಿನ ಸುದ್ದಿ ನಾಡಲ್ಲೆಲ್ಲಾ ಹರಡಿ ಅರಸನ ಕಿವಿಗೂ ಮುಟ್ಟಿತು. ಅರಸನು ಗುಟ್ಟಾಗಿ ಅವಳಿಗೆ ಹೇಳಿಕಳುಹಿಸಿದನು. ಅರಸನ ಆಳುಗಳು ಬರುತ್ತಲೂ ಅವಳು ತನ್ನ ಗಂಡನನ್ನು ತೊರೆದು ಹೇಳದೆ ಕೇಳದೆ ಅವರ ಹಿಂದೆ ಹೊರಟುಹೋದಳು.

ಅಲ್ಲಿ ಎಷ್ಟೋದಿವಸ ಗಂಡನ ಯೋಚನೆಯೇ ಇಲ್ಲದೆ ಅವಳು ಸುಖವಾಗಿದ್ದಳು. ಒಂದು ದಿನ ತಟ್ಟನೆ ಹಿಂದಿನ ಗಂಡನ ಯೋಚನೆ ಬಂತು. "ಅವನು ಬಹು ಬುದ್ಧಿವಂತ. ಯಾವೊತ್ತಾದರೂ ಏನಾದರೂ ಕೆಡಕು ಮಾಡದೆ ಬಿಡುವನಲ್ಲ. ಆದರಿಂದ ಅವನನ್ನು ಏನಾದರೂ ಮಾಡಿ ತೀರಿಸಿಬಿಡಬೇಕು" ಎಂದುಕೊಂಡು ಹೊಸಗಂಡನಿಗೆ ಹೇಳಿದಳು: "ಅವನ ಜೀವ ಇಂತಹ ಮರದಮೇಲಿದೆ. ಆ ಮರ ಕಡಿಸಿಬಿಟ್ಟರೆ, ಆ ಜೀವ ಹೋಗಿಬಿಡುತ್ತದೆ. ನಾವಿಬ್ಬರೂ ಸುಖವಾಗಿರಬಹುದು" ಎಂದಳು.

ಅರಸನು ಆಗಲಿ ಎಂದು ಆಳುಗಳನ್ನು ಕಳುಹಿಸಿ ಆ ಮರವನ್ನು ಕಡಿಯಿಸಿ ಹಾಕಿದನು. ಇತ್ತ ಅಣ್ಣನಿಗೆ ತಮ್ಮನು ಹೇಳಿದ್ದ ಗುರುತು ಹೇಗೋ

ತಿಳಿದು ತಮ್ಮನನ್ನು ನೋಡಲು ಹೊರಟನು. ತಮ್ಮನು ತನ್ನ ಮನೆಯಲ್ಲಿ ಸತ್ತು ಬಿದ್ದಿದ್ದನು.

ಅಣ್ಣನು ಆ ಮರವನ್ನು ಹುಡುಕಿಕೊಂಡು ಹೋದನು. ಆಗಲೇ ಆ ಮರದ ಕೊಂಬೆಗಳೆಲ್ಲ ಒಣಗಿಹೋಗಿದ್ದುವು. ಎಲ್ಲೆಲ್ಲಿ ಹುಡುಕಿದರೂ ಅಲ್ಲಿ ತಮ್ಮನ ಜೀವ ಕಾಣಲಿಲ್ಲ. ಕೊನೆಗೆ, ಕೊನೆಕೊನೆ ಕೊಂಬೆಯೊಂದ ರಲ್ಲಿ ಒಂದು ದೊಡ್ಡ ಹಣ್ಣು ಕಣ್ಣಿಗೆ ಬಿತ್ತು. ಉಳಿದ ಹಣ್ಣುಗಳಿಗಿಂತ ಭಾರಿಯಾಗಿದ್ದುದರಿಂದ ಅದರಮೇಲೆ ಅವನಿಗೆ ಮನಸ್ಸಾಗಿ ಇದರಲ್ಲಿ ಇದೆಯೋ ಏನೋ ನೋಡೋಣ ಎಂದುಕೊಂಡು ಅದನ್ನು ತೆಗೆದುಕೊಂಡು ನೀರಿನಲ್ಲಿ ಇಟ್ಟನು. ಅದು ಚೇತರಿಸಿಕೊಂಡಂತೆಲ್ಲ, ಇತ್ತ ತಮ್ಮನೂ ಚೇತರಿಸಿ ಕೊಂಡು ಎದ್ದು ಕುಳಿತನು.

ತಮ್ಮನು ಬದುಕಿಕೊಂಡು ನಡೆದುದನ್ನೆಲ್ಲ ಅಣ್ಣನಿಗೆ ಹೇಳಿ "ಅವಳ ಮೇಲಿನ ಮುಯ್ಯಿ ತೀರಿಸಬೇಕು. ಕೆಟ್ಟಜಾತಿ ಹೆಣ್ಣು. ಅದನ್ನು ಹಾಗೇ ಬಿಡಬಾರದು. ನಾಳೆಯ ದಿನ ನಾನು ಮಂತ್ರಮಾಡಿ ಮುದ್ರೆಗೂಳಿಯಾಗಿ ಬರುತ್ತೇನೆ, ನನ್ನನ್ನು ತೆಗೆದುಕೊಂಡು ಹೋಗಿ ಅರಮನೆಯಲ್ಲಿ ಮಾರಿಬಿಡು. ಮುಂದಿನ ಕೆಲಸ ನಾನು ನೋಡಿಕೊಳ್ಳುತ್ತೇನೆ" ಎಂದನು. ಅಣ್ಣನು ಆಗಲೆಂದನು.

ಮರುದಿನ ಅಣ್ಣನು ಒಬ್ಬ ಗೌಳಿಗನ ವೇಷ ಹಾಕಿಕೊಂಡು ಆ ಮುದ್ರೆ ಗೂಳಿಯನ್ನು ತಂದು ಅರಮನೆಗೆ ಕೊಟ್ಟನು. ಅರಸನು ಆ ಗೂಳಿ ಯನ್ನು ಬಲು ಮೆಚ್ಚಿಕೊಂಡು, ಆ ಗೌಳಿಗನಿಗೆ ಬೇಕಾದ ಹಾಗೆ ಮರ್ಯಾದೆ ಮಾಡಿದನು. ಬೆಳ್ಳಿಬಂಗಾರಗಳನ್ನೆಲ್ಲ ಕೊಟ್ಟನು.

ಗೂಳಿಯು ಸರ್ವಮೊಕ್ತೇಸರನ ಹಾಗೆ ಅರಮನೆಯಲ್ಲಿ ಎಲ್ಲಿ ಬೇಕಾ ದರೂ ಅಲೆದುಕೊಂಡಿರಲಿ ಎಂದು ಅರಸನು ಬಿಟ್ಟಿದ್ದನು. ಒಂದು ದಿನ ಅದು ಆ ಕೆಟ್ಟ ಹೆಣ್ಣು ಇದ್ದ ತೊಟ್ಟಿಗೆ ಹೋಯಿತು. ಅವಳು ಈ ಮುದ್ದಾದ ಗೂಳಿ ಯನ್ನು ಕಂಡು ಅಕ್ಕರೆ ಮಾಡಿದಳು. ಗೂಳಿಯು ಯಾರೂ ಇಲ್ಲದ ಸಮಯ

ನೋಡಿಕೊಂಡು "ನೀನು ನನ್ನನ್ನು ಕೊಲ್ಲಿಸಬೇಕೆಂದು ಯತ್ನಿಸಿದೆ, ನಾನಿನ್ನೂ ಬದುಕಿದ್ದೇನೆ" ಎಂದಿತು.

ಅವಳು ಗಾಬರಿಯಾಗಿ "ನಾನು ?—ಯಾರು ?" ಎಂದಳು. "ನಾನೇ ? ನಾನು ನಿನ್ನ ಹಳೆಯ ಗಂಡ" ಎಂದು ಹೇಳಿ ಹೂಂಕರಿಸಿ ಅಲ್ಲಿ ನಿಲ್ಲದೆ ಹೊರಟುಹೋಯಿತು.

ಅವಳಿಗೆ ಎದೆ ನಡುಗಿಹೋಯಿತು. ಜಂಘಾಬಲ ಬಿದ್ದುಹೋಯಿತು. ಅವಳು ಅಷ್ಟು ಹೊತ್ತಾದಮೇಲೆ ಚೇತರಿಸಿಕೊಂಡು "ಇನ್ನು ಇದನ್ನು ಉಳಿಸಬಾರದು" ಎಂದು ದೃಢಮಾಡಿಕೊಂಡು ಅರಸನ ಬಳಿಗೆ ಬಂದಳು. "ಅರಸಾ! ನನಗೆ ಆ ಗೂಳಿಯ ಮಾಂಸವನ್ನು ತಿನ್ನಬೇಕೆಂದು ಆಸೆಯಾಗುತ್ತದೆ. ತರಿಸಿ ಕೊಡು" ಎಂದಳು.

ಅರಸನಿಗೆ ಗೂಳಿಯ ಮೇಲೆ ಬಹಳ ವಿಶ್ವಾಸ. ಆದರೂ ಹೆಂಡತಿಯ ಮಾತನ್ನು ಮೀರಲಾರದೆ, ಅವಳ ಮನಸ್ಸನ್ನು ಮುರಿಯಲಾರದೆ ಒಪ್ಪಿಕೊಂಡನು. ಗೂಳಿಯನ್ನು ಕೊಲ್ಲಿಸಿ ಅದರ ಮಾಂಸವನ್ನು ತರಿಸಿ ಹೆಂಡತಿಗೆ ಕೊಡಿಸಿದನು.

ಆದರೆ ಆ ಗೂಳಿಯನ್ನು ಕೊಲ್ಲುವಾಗ ಎರಡು ತೊಟ್ಟು ರಕ್ತ ಆ ಗೂಳಿಯ ಕತ್ತಿನಿಂದ ಹೊರಬಿದ್ದು ಹರಿದುಹೋದುವು. ಅವು ಅರಮನೆಯ ಬಾಗಿಲಲ್ಲಿ ನಿಂತು ನೆಲದೊಳಕ್ಕೆ ಇಳಿದು ಅಲ್ಲಿಯೇ ಎರಡು ಅಕೇಷಿಯಾ ಮರಗಳಾದವು. ಎಲ್ಲರೂ ಅಚ್ಚರಿಪಡುವಂತೆ ಕೆಲವು ದಿನಗಳೊಳಗಾಗಿ ಎತ್ತರವಾಗಿ ನಿಲುವಾಗಿ ಸೊಗಸಾಗಿ ಬೆಳೆದು ನಿಂತುವು. ಅರಸನು ಆ ಚೆಲುಮರಗಳನ್ನು ನೋಡಿ ಮೆಚ್ಚಿಕೊಂಡು, "ಈ ಮರಗಳಿಗೆ ಯಾರೂ ಏನೂ ಕೆಟ್ಟುದು ಮಾಡಬಾರದು. ಮುದ್ದಾಗಿ ಬೆಳೆದಿವೆ. ಅಂದವಾಗಿವೆ" ಎಂದು ಕಟ್ಟಪ್ಪಣೆ ಮಾಡಿದನು.

ಹೀಗೆ ಇರಲು ಒಂದು ದಿನ ಆ ಅರಸಿಯು ಪಲ್ಲಕ್ಕಿಯಲ್ಲಿ ಕುಳಿತು ಅತ್ತಕಡೆ ವೈಭವದಿಂದ ಬಂದಳು. ಮರದ ಕೊಂಬೆಯೊಂದು ಬಾಗಿ,

"ಕೆಟ್ಟ ಹೆಣ್ಣೆ! ನನ್ನನ್ನು ಕೊಲ್ಲಿಸಿದೆನೆಂದುಕೊಂಡಿರುವೆ. ನಾನಿನ್ನೂ ಬದುಕಿದ್ದೇನೆ, ನೋಡು. ನಾನು! ನಾನು! ನಿನ್ನ ಹಳೆಯ ಗಂಡ!" ಎಂದಿತು.

ಅವಳು ಮತ್ತೆ ಗಾಬರಿಯಾದಳು. ಏನೇನೋ ನೆಪಹೇಳಿ ಅರಸನಿಗೆ ಆ ಮರಗಳನ್ನು ಕಡಿಸಲು ಇಷ್ಟವಿಲ್ಲದಿದ್ದರೂ ಕಡಿಸಲು ಒಪ್ಪಿಸಿದಳು. ಇನ್ನು ಯಾರಿಗಾದರೂ ಒಪ್ಪಿಸಿದರೆ ಮತ್ತೆ ಮೋಸವಾದೀತೆಂದು ತಾನೇ ಎದುರಿಗೆ ಬಂದು ನಿಂತು ಆಳುಗಳನ್ನು ಕರೆದು ಮರವನ್ನು ಕಡಿಯಲು ಬಿಟ್ಟಳು.

ಮರವನ್ನು ಕಡಿಯುತ್ತಿರುವಾಗ ಒಂದು ದೊಡ್ಡ ಸೀಳು ಸಿಡಿದುಬಂದು ಅವಳ ಬಾಯನ್ನು ಹೊಕ್ಕು ಕತ್ತಿಗೆ ಸೆಟ್ಟುಕೊಂಡು ಅವಳಿಗೆ ಮೃತ್ಯುವಾಯಿತು. ಅವಳು ಸತ್ತುಬಿದ್ದಳು.

ಅರಸನು ಶೋಕಿಸುತ್ತಿರುವಾಗ ಬಿಟೂವು ಎದುರಿಗೆ ಬಂದು ನಿಂತು ಅವಳ ಮೋಸವನ್ನೆಲ್ಲ ಹೇಳಿದನು. ಅವಳು ಮೋಸಗಾತಿಯೆಂದು ತಿಳಿದ ಮೇಲೆ ಅರಸನು ಅವಳ ಮೇಲಿನ ಮೋಹವನ್ನು ಬಿಟ್ಟನು. ಬಿಟೂವನ್ನು ಅರಸನು ಗೌರವಿಸಿ ತನ್ನ ಬಳಿಯಲ್ಲಿಯೇ ಇಟ್ಟುಕೊಂಡನು.

---

# ಹಣೆಯ ಬರಹ

ಈಜಿಪ್ಟಿನಲ್ಲಿ ಒಬ್ಬ ದೊರೆಯಿದ್ದನು. ಅವನಿಗೆ ಎಲ್ಲಾ ಸೌಭಾಗ್ಯಗಳೂ ಇದ್ದರೂ ಗಂಡುಮಕ್ಕಳಾಗಲಿಲ್ಲ ಎಂಬ ಕೊರತೆ ವಿಶೇಷವಾಗಿತ್ತು. ಅವನು ಹಿರಿಯರ ಮಾತಿನಂತೆ ದೇವರಿಗೆ ಹರೆಸಿಕೊಂಡನು. ದೇವರ ವರದಿಂದ ಅವನಿಗೆ ಒಂದು ಗಂಡು ಮಗುವಾಯಿತು.

ಆ ಮಗುವು ಇನ್ನೂ ಅರೆಮನೆಯಲ್ಲಿ (ಎಂದರೆ ಮಗುವನ್ನು ಹೆತ್ತ ಕೋಣೆ) ಇರುವಾಗಲೇ ವಿಧಿ ದೇವಿಯರು ಆ ಮಗುವಿನ ಹಣೆಯಲ್ಲಿ ಬರೆಯಲು ಬಂದರು. ಅವರು ಏಳು ಜನ. ಅವರು "ಇವನು ಮೊಸಳೆಯಿಂದ,

ಅದು ತಪ್ಪಿದರೆ ಹಾವಿನಿಂದ, ಅದು ತಪ್ಪಿದರೆ ನಾಯಿಯಿಂದ, ಸಾಯುವನು'' ಎಂದು ಗೊತ್ತುಮಾಡಿ ಹೊರಟುಹೋದರು. ಅರಮನೆಯ ಬಾಗಿಲಲ್ಲಿ ಕಾವಲಿದ್ದವರು ಅವರು ಮಾತನಾಡಿದುದನ್ನು ಕೇಳಿಕೊಂಡು, ದೊರೆಗೆ ಹೇಳಿದರು. ದೊರೆಗೆ ದೇವರ ವರದಿಂದ ಹುಟ್ಟಿದ ಮಗುವಿಗೂ ಹೀಗೆ ದುರ್ಮರಣವಾಗುವುದಲ್ಲ ಎಂದು ಸಂಕಟವಾಯಿತು. ಇರಲಿ, ಎಂದು ಒಂದು ಭಾರಿಯ ಮರಳುಗಾಡಿನ ಅಂಚಿನಲ್ಲಿ ಒಂದು ಕಲ್ಲಿನರಮನೆಯನ್ನು ಕಟ್ಟಿಸಿ, ಆ ಮಗುವನ್ನೂ ಅದರ ತಾಯಿಯನ್ನೂ ಅಲ್ಲಿ ಇಟ್ಟನು. ಅವರು ಯಾವುದಕ್ಕೂ ಅರಮನೆಯಿಂದ ಹೊರಗೆ ಬರಲೇ ಬೇಕಾಗಿರಲಿಲ್ಲ.

ಮಗುವು ಬೆಳೆದು ಒಳ್ಳೆಯ ಹುಡುಗನಾದನು. ಒಂದು ದಿನ ಮಹಡಿ ಹತ್ತಿ ನಿಂತಿರುವಾಗ ಅವನ ಕಣ್ಣಿಗೆ ಒಂದು ಸಲೂಗಿ ಎಂದರೆ ಬೇಟೆಯ ನಾಯಿ ತನ್ನ ಯಜಮಾನನ ಹಿಂದೆ ಹೋಗುತ್ತಿರುವುದು ಕಣ್ಣಿಗೆ ಬಿತ್ತು. ಅವನು ಅದುವರೆಗೆ ನಾಯಿಯನ್ನೇ ನೋಡಿರಲಿಲ್ಲ. ಅದನ್ನು ನೋಡಿ ಅಂಥಾದ್ದು ತನಗೂ ಬೇಕು ಎಂದು ಆಸೆಪಟ್ಟನು. ಮಗನ ಮನಸ್ಸು ನೊಂದೀತೆಂದು ಅರಸನು ಒಂದು ಬೇಟೆಯನಾಯಿಯ ಮರಿಯನ್ನು ತರಿಸಿಕೊಟ್ಟನು.

ಪ್ರಾಯಸ್ಥನಾದ ಮೇಲೆ ಅವನು ತಂದೆಯ ಬಳಿಗೆ ಹೋಗಿ "ನಾನೇಕೆ ಈ ಕಲ್ಲಿನ ಮನೆಯಲ್ಲಿ ಸೆರೆ ಬಿದ್ದಿರಲಿ? ದೈವಚಿತ್ತವಿದ್ದ ಹಾಗೆ ಆಗುತ್ತದೆ. ನಾನು ದೇಶಸಂಚಾರ ಮಾಡಿಕೊಂಡು ಬರುತ್ತೇನೆ. ಹೋಗಿ ಬರಲು ಅಪ್ಪಣೆ ಕೊಡು" ಎಂದು ಕೇಳಿದನು. ದೊರೆಯು ಮಗನ ಮಾತೇ ಸರಿಯೆಂದು "ಆಗಲಿ. ಹೋಗಿಬಾ" ಎಂದನು. ಅವನಿಗೆ ಬೇಕುಬೇಕಾದ ಆಯುಧಗಳು, ವಸ್ತ್ರಭೂಷಣಗಳು, ಹಣ ಕಾಸು ಕೊಟ್ಟು, ತಾನೇ ಒಂದು ಹೊಳೆಯನ್ನು ದಾಟಿಸಿ, "ಬೇಕಾದ ಕಡೆ ಹೋಗಿ ಬಾ" ಎಂದು ಕಳುಹಿಸಿಕೊಟ್ಟನು. ಅವನ ನಾಯಿಯು ಅವನ ಜೊತೆಯಲ್ಲಿಯೇ ಇತ್ತು. ಅವನು ಈಜಿಪ್ಟಿನ ಉತ್ತರದಲ್ಲಿ ಇರುವ ಕಾಡಿಗೆ ಹೋಗಿ ಅಲ್ಲಿ ಬೇಟೆಯಾಡುತ್ತ ಕೆಲವು ದಿನವಿದ್ದನು.

ಅಲ್ಲಿಂದ ಹೊರಟು ಹಾಗೆಯೇ ಸುತ್ತಿಕೊಂಡು ಅವನು ಮೆಸೆಪೊಟೋಮಿಯಕ್ಕೆ ಬಂದನು. ಆಗ ಅದರ ಹೆಸರು ಸಹರಿನಾ. ಅಲ್ಲಿನ ದೊರೆಗೆ ಒಬ್ಬ ಮಗಳು ವಿನಾ ಬೇರೆ ಮಕ್ಕಳಿರಲಿಲ್ಲ. ಅವನು ಅವಳಿಗಾಗಿಯೇ ಒಂದು ಮನೆಯನ್ನು ಕಟ್ಟಿಸಿ ಅದರಲ್ಲಿ ಅವಳನ್ನು ಇಟ್ಟಿದ್ದನು. ಆ ಮನೆಗೆ ನೆಲದಿಂದ ಎಪ್ಪತ್ತು ಗಜದ ಎತ್ತರದಲ್ಲಿ ಒಂದು ಕಿಟಿಕಿ. ಪಕ್ಕದ ರಾಜ್ಯವಾದ ಖಿರು (ಈಗಿನ ಸಿರಿಯಾ) ದೇಶದ ರಾಜಪುತ್ರರನ್ನು ಕರೆಸಿ, "ನಿಮ್ಮಲ್ಲಿ ಯಾರು ಈ ಕಿಟಿಕಿಗೆ ಹತ್ತುವನೋ ಅವನಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುವೆನು" ಎಂದು ಹೇಳಿದ್ದನು. ಅವರಿಗೆ ಅದೇ ಕೆಲಸವಾಗಿ ಹೋಯಿತು. ದಿನವೂ ಆ ರಾಜಪುತ್ರಿಯ ಅರಮನೆಯ ಬಳಿ ಬೆಳಗಿಂದ ಸಂಜೆಯವರೆಗೂ ಗೋಡೆಯನ್ನು ಹತ್ತುವುದಕ್ಕೆ ಪ್ರಯತ್ನ ಮಾಡುತ್ತಿರುವರು. ಈ ಅರಸು ಮಗನು ಬರುವ ವೇಳೆಗೆ ಖಿರು ರಾಜಪುತ್ರರು ತಮ್ಮ ಸರ್ಕಸ್ಸು ಆರಂಭಿಸಿ ಎಷ್ಟೋ ದಿನವಾಗಿತ್ತು.

ಈಜಿಪ್ಟಿನ ರಾಜಪುತ್ರನು ಅಲ್ಲಿಹೋಗಿ ನಿಂತು ಖಿರು ರಾಜಪುತ್ರರನ್ನು ಏನು ಮಾಡುತ್ತಿರುವಿರಿ ಎಂದು ಕೇಳಿದನು. ಅವರಿಂದ ಎಲ್ಲವನ್ನೂ ಕೇಳಿ ತಿಳಿದುಕೊಂಡು "ನಾನೂ ನಿಮ್ಮೊಡನೆ ಪ್ರಯತ್ನಿಸಬಹುದೆ?" ಎಂದು ಕೇಳಿದನು. ಅವರು "ಆಗಬಹುದು" ಎಂದರು. ಇವನು ಅಲ್ಲಿಯೇ ಕೆಲವು ದಿನ ನಿಂತುಕೊಂಡು ಅವರು ಏನೇನು ಮಾಡುತ್ತಿರುವರೋ ನೋಡಿ ಕೊನೆಯಲ್ಲಿ ತಾನು ಹತ್ತಿಯೇ ಬಿಟ್ಟನು. ಇವನು ಕಿಟಿಕಿಗೆ ಹೋಗುತ್ತಲೂ ರಾಜಪುತ್ರಿಯೂ ಬಂದು ಇವನನ್ನು ಒಳಕ್ಕೆ ಕರೆದುಕೊಂಡು ಹೋಗಿ ಬೇಕಾದ ಉಪಚಾರ ಮಾಡಿದಳು; ನೀನೇ ನನ್ನ ಗಂಡ ಎಂದು ಒಪ್ಪಿಕೊಂಡಳು.

ಹೀಗೆ ಯಾವನೋ ಕಿಟಿಕಿಗೆ ಹತ್ತಿದನು ಎಂಬ ಸುದ್ದಿಯು ದೊರೆಗೆ ತಿಳಿಯಿತು. ದೊರೆಯು "ಅವನು ಯಾವ ರಾಜಪುತ್ರನೋ ವಿಚಾರಿಸಿಕೊಂಡು ಬನ್ನಿ" ಎಂದು ದೂತರನ್ನು ಕಳುಹಿಸಿದನು. ರಾಜಪುತ್ರನು "ನಾನು ಈಜಿಪ್ಟಿನವನು. ಅಲ್ಲಿ ನಮ್ಮ ತಂದೆಯು ದೊಡ್ಡ ಅಧಿಕಾರ

ದಲ್ಲಿದ್ದಾನೆ. ಆತನು ಎರಡನೆಯ ಮದುವೆಯನ್ನು ಮಾಡಿಕೊಂಡನು. ಬಲ ತಾಯಿಯು ತನಗೆ ಮಕ್ಕಳಾದ ಮೇಲೆ ನನಗೆ ಕೇಡು ಎಣಿಸಿದಳು. ಆದಕ್ಕಾಗಿ ಅಲ್ಲಿಂದ ಹೊರಟು ಬಂದಿದ್ದೇನೆ" ಎಂದು ಹೇಳಿದನು.

ಇದನ್ನು ಕೇಳಿ ದೊರೆಗೆ ರೇಗಿಹೋಯಿತು. "ಮನೆಬಾಗಿಲು ಬಿಟ್ಟು ಓಡಿಬಂದವನಿಗೆ ನನ್ನ ಮಗಳನ್ನು ಕೊಡಲೇ? ಉಹುಂ. ನಾನು ಕೊಡುವುದಿಲ್ಲ. ಅವನು ಬಂದ ದಾರಿಯನ್ನು ಹಿಡಿದುಕೊಂಡು ಹೋಗಲಿ" ಎಂದು ಅಬ್ಬರಿಸಿಬಿಟ್ಟನು.

ಇದು ರಾಜಪುತ್ರಿಗೆ ತಿಳಿಯಿತು. ಅವಳು ಗಂಡನನ್ನು ತಬ್ಬಿಕೊಂಡು "ನೀನು ಹೊರಟುಹೋಗಕೂಡದು. ನೀನು ಹೋದರೆ ರಾಹರ್‌ಅಖ್ತಿ ದೇವರ ಆಣೆ, ನಾನು ಅನ್ನ ತಿನ್ನುವುದಿಲ್ಲ, ನೀರು ಕುಡಿಯುವುದಿಲ್ಲ, ಸತ್ತುಹೋಗುತ್ತೇನೆ"ಎಂದು ಕಟ್ಟಆಣೆಯಿಟ್ಟುಕೊಂಡಳು. ದೊರೆಗೆ ಇದು ತಿಳಿದು "ಹೋಗಿ ಅವನನ್ನು ಕೊಂದುಹಾಕಿಬಿಡಿ" ಎಂದು ಆಳುಗಳನ್ನು ಕಳುಹಿಸಿದನು. ಅವರು ಬರಲು ರಾಜಪುತ್ರಿಯು "ಅವನನ್ನು ಕೊಂದರೆ, ನಾನೂ ಸತ್ತುಹೋಗುತ್ತೇನೆ. ಅವನು ಸತ್ತ ಒಂದು ಗಳಿಗೆಯೊಳಗಾಗಿ ಪ್ರಾಣತ್ಯಾಗ ಮಾಡುತ್ತೇನೆ. ಈ ಮಾತು ನಮ್ಮ ತಂದೆಗೆ ತಿಳಿಸಿ ಬನ್ನಿ" ಎಂದಳು. ದೊರೆಯು ಹೀಗೆ ಮಗಳು ಹಟ ಹಿಡಿದುದನ್ನು ನೋಡಿ ಇನ್ನು ಪ್ರಯೋಜನವಿಲ್ಲವೆಂದು ತಾನೇ ಸೋತು ಇಬ್ಬರಿಗೂ ಮದುವೆ ಮಾಡಿದನು. ಅಳಿಯನಿಗೂ ಮಗಳಿಗೂ ಬೇಕಾದ ಬಳುವಳಿಯನ್ನು ಕೊಟ್ಟು ಅವರಿಗೇ ಒಂದು ಅರಮನೆ, ಆಳುಕಾಳು ಎಲ್ಲವನ್ನೂ ಕೊಟ್ಟು ಕಳುಹಿಸಿದನು.

ಹೀಗೆ ಗಂಡ ಹೆಂಡಿರು ಸುಖವಾಗಿರುವವಾಗ ಒಂದು ದಿನ ಇವನು ತನ್ನ ವಿಧಿಯನ್ನು ಕುರಿತು ಹೆಂಡತಿಗೆ ಹೇಳಿದನು; "ನನಗೆ ಮೂರು ಮೃತ್ಯುಗಳು ಕಾದಿವೆ. ಮೊಸಳೆ ಒಂದು, ಹಾವು ಎರಡು, ನಾಯಿ ಮೂರು" ಎಂದನು. ಹೆಂಡತಿಯು "ಹಾಗಾದರೆ ಈ ನಿನ್ನ ನಾಯಿಯನ್ನು ಮೊದಲು ಕೊಲ್ಲಿಸಿಬಿಡುತ್ತೇನೆ" ಎಂದಳು. ಗಂಡನು "ಉಂಟೆ? ಅದು ನನ್ನ ಹತ್ತಿರ

ಬಂದಾಗ ಒಂದು ಸಣ್ಣ ಮರಿ. ಅಷ್ಟು ದಿಸದಿಂದಲೂ ಅದನ್ನು ಕಾಪಾಡಿ ದ್ದೇನೆ. ಈಗ ಕೊಲ್ಲಿಸಲೇ ? ಆಗದು" ಎಂದನು. ಹೆಂಡತಿಯು ಅವನು ಒಪ್ಪಲಿಲ್ಲವೆಂದು ವ್ಯಸನಪಟ್ಟುಕೊಂಡು "ಹೋಗಲಿ. ಇನ್ನು ಮೇಲೆ ಎಲ್ಲಿ ಹೋಗಬೇಕಾದರೂ ನನ್ನನ್ನು ಬಿಟ್ಟು ಹೋಗಕೂಡದು" ಎಂದು ಗಂಡ ನಿಂದ ಮಾತು ತೆಗೆದುಕೊಂಡಳು.

ಹೆಂಡಿತಿಯು ಗಂಡನಿಗೆ ಈ ಮೃತ್ಯುಗಳು ತಪ್ಪಲಿ ಎಂದು ದಿನವೂ ರಾದೇವನಿಗೆ ಎಂದರೆ ಸೂರ್ಯನಿಗೆ ಪೂಜೆಮಾಡುತ್ತ ಬಂದಳು. ಒಂದು ದಿನ ಅವಳ ಕನಸಿನಲ್ಲಿ ಒಬ್ಬ ಮುದುಕನು ಬಂದು "ನಾಳೆಯ ರಾತ್ರಿ ನಿನ್ನ ಗಂಡನು ನಿದ್ದೆಹೋಗುವಾಗ ನೀನು ಎಚ್ಚರವಾಗಿ ಕಾದಿರು. ಒಂದು ಬಟ್ಟಲು ಮದ್ಯವನ್ನೂ ಒಂದು ಬಟ್ಟಲು ಹಾಲನ್ನೂ ಇಟ್ಟುಕೊಂಡಿರು. ಒಂದು ಸರ್ಪವು ಬರುವುದು. ಅದರ ಮುಂದೆ ಎರಡು ಬಟ್ಟಲುಗಳನ್ನೂ ಇಡು. ಅದು ಮದ್ಯವನ್ನು ಕುಡಿದು ಮತ್ತಾಗಿ ಬಿದ್ದುಕೊಳ್ಳುವುದು. ಅದನ್ನು ತೀರಿಸಿ ಬಿಡು. ನಿನ್ನ ಗಂಡನಿಗೆ ಬರುವ ಅಪಮೃತ್ಯುವು ತೀರು ವುದು" ಎಂದು ಹೇಳಿದಂತಾಯಿತು.

ಮರುದಿನ ಗಂಡನು ಬೇಟೆಗೆ ಹೊರಟನು. ಹೆಂಡತಿಯೂ ಜೊತೆ ಯಲ್ಲಿಯೇ ಹೋದಳು. ಸಂಜೆಯವರೆಗೂ ಬೇಟೆಯಾಡಿ ಗಂಡಹೆಂಡಿರು ಹಿಂದಿರುಗಿ ಬಂದರು. ಗಂಡನು ಬರುತ್ತಿದ್ದ ಹಾಗೆಯೇ ಊಟಮಾಡಿ ಮಲ ಗಿದನು. ಗಾಢನಿದ್ರೆಯು ಬಂತು. ಗೊರಕೆ ಹೊಡೆಯುತ್ತ ಮಲಗಿದನು.

ಹೆಂಡತಿಯು ಮಾತ್ರ ಎಚ್ಚರವಾಗಿ ಕಾದಿದ್ದಳು. ಒಂದು ಬಟ್ಟಲು ಮದ್ಯ, ಒಂದು ಬಟ್ಟಲು ಹಾಲು ಮಗ್ಗುಲಲ್ಲಿಯೇ ಇದೆ. ಅವಳಿಗೂ, ಪಾಪ! ಆಯಾಸವಾಗಿದೆ. ಕಣ್ಣೆಳೆದುಕೊಂಡು ಹೋಗುತ್ತಿದ್ದರೂ, ಬಲವಂತವಾಗಿ ಕಣ್ಣುಬಿಟ್ಟುಕೊಂಡು ನಿದ್ದೆಯನ್ನು ತಡೆದುಕೊಂಡು ಕುಳಿತಿದ್ದಾಳೆ. ಸುಮಾರು ನಟ್ಟಿರುಳು ಇರಬಹುದು. ಸರಸರ ಎಂದ ಹಾಗಾಯಿತು. ತಟ್ಟನೆ ಎದ್ದು ನೋಡಿದಳು. ಸರ್ಪ: ಬರುತ್ತಿದೆ. ಅವಳಿಗೆ ಅಂಜಿಕೆಯಾಯಿತು.

ಆದರೂ ಇದ್ದುದರಲ್ಲಿ ಧೈರ್ಯಮಾಡಿಕೊಂಡು, ಆ ಎರಡು ಬಟ್ಟಲುಗಳನ್ನು ತೆಗೆದು ಮುಂದಿಟ್ಟಳು. ಹಾವು ಹಾಲನ್ನು ಮೂಸಿ ನೋಡಿ ಅದನ್ನು ಬಿಟ್ಟು ಮದ್ಯದ ಬಟ್ಟಲಿನ ಕಡೆಗೆ ತಿರುಗಿ ಅದನ್ನೇ ಕುಡಿಯಿತು. ಕುಡಿಯುತ್ತ ಹಾಗೆಯೇ ಅದಕ್ಕೆ ಮತ್ತು ಹಿಡಿದು ಬಿದ್ದುಹೋಯಿತು. ರಾಜಪುತ್ರಿಯು ತನ್ನಲ್ಲಿದ್ದ ಕತ್ತಿಯಿಂದ ಅದನ್ನು ಕಡಿದು ತುಂಡುತುಂಡು ಮಾಡಿ, ಅವುಗಳನ್ನೆಲ್ಲ ಭದ್ರವಾಗಿ ಒಂದು ಕಡೆ ಎತ್ತಿಟ್ಟು ತಾನೂ ಮಲಗಿದಳು.

ಬೆಳಗ್ಗೆದ್ದು ಗಂಡನನ್ನು ಕರೆದು ಹಾವನ್ನು ತೋರಿಸಿ, "ನಿನ್ನ ಮೃತ್ಯುಗಳಲ್ಲಿ ಒಂದು ಕಳೆಯಿತು" ಎಂದಳು. ಗಂಡನೂ ಹೆಂಡತಿಯನ್ನು ಬೇಕಾದ ಹಾಗೆ ಉಪಚಾರಮಾಡಿ "ನಿನ್ನಿಂದ ಈ ಮೃತ್ಯು ತೊಲಗಿತು. ನೀನು ಪುಣ್ಯವಂತೆ! ನಿನ್ನ ಪುಣ್ಯದಿಂದ ನಾನೂ ಉಳಿದುಕೊಂಡೆ" ಎಂದು ಬಹಳವಾಗಿ ಹೊಗಳಿದನು.

ಈ ಸರ್ಪದ ಘಟನೆಯು ಕಳೆದಮೇಲೆ ಅಷ್ಟು ದಿನಗಳಾದುವು. ಒಂದು ದಿನ ಇಬ್ಬರೂ ಬೇಟೆಗೆ ಹೋದರು. ಅಲ್ಲಿ ರಾಜಪುತ್ರನ ನಾಯಿಯು ಒಂದು ಕಾಡು ಹಂದಿಯನ್ನು ಹಿಡಿಯಿತು. ಅದು ಭರ್ರನೆ ಓಡಿಹೋಗಿ ಒಂದು ಸರೋವರದಲ್ಲಿ ಬಿತ್ತು. ರಾಜಪುತ್ರನೂ ಅವುಗಳ ಹಿಂದೆಯೇ ಹೋಗಿ ತಾನೂ ನೀರಿನಲ್ಲಿ ಧುಮುಕಿದನು. ಕೂಡಲೆ ಒಂದು ಮೊಸಳೆಯು ಬಂದು ಅವನನ್ನು ಹಿಡಿಯಿತು. ಅದು ಹಿಡಿಯುತ್ತಿದ್ದ ಹಾಗೆಯೇ ಒಬ್ಬ ದೇವದೂತನು ಬಂದು ಮೊಸಳೆಯನ್ನು ಅಡ್ಡಹಾಕಿದನು. ಮೊಸಳೆಯು ದೇವದೂತನೊಡನೆ ಬೇಕಾದಷ್ಟು ಹೋರಾಡಿತು.

ಹೀಗೆ ಇವರು ಹೋರಾಡುತ್ತಿರುವಾಗ ರಾಜಪುತ್ರನ ಹೆಂಡತಿಯು ಅಲ್ಲಿಗೆ ಬಂದಳು. ದೇವದೂತನು ಅದನ್ನು ಕಂಡು ಮೊಸಳೆಯನ್ನು ಬಲವಾಗಿ ಹಿಡಿದು ಎಳೆದು ಮೇಲಕ್ಕೆ ಎಸೆದನು. ಅವಳು ಅದು ಬೀಳುತ್ತಿದ್ದ ಹಾಗೆಯೇ ಹೋಗಿ ತನ್ನ ಕೊಡಲಿಯಿಂದ ಎರಡು ಭಾರಿ ಹೊಡೆತಗಳನ್ನು ಹೊಡೆದಳು. ಆ ವೇಳೆಗೆ ದೇವದೂತನೂ ಬಂದನು. ನಾಯಿಯೂ ಬಂತು.

ರಾಜಪುತ್ರನೂ ಬಂದನು. ಎಲ್ಲರೂ ಸೇರಿ ಮೊಸಳೆಯನ್ನು ಕೊಂದು ಹಾಕಿದರು.

"ಇರಲಿ. ಎರಡು ಸಲ ತಪ್ಪಿಸಿಕೊಂಡೆ, ಇನ್ನೂ ಒಂದಿದೆ. ಅದನ್ನು ನೀನು ಹೇಗೆ ತಪ್ಪಿಸಿಕೊಳ್ಳುವೆಯೋ ನೋಡೋಣ" ಎಂದು ವಿಧಿಯು ಅವನಿಗೆ ಹೇಳಿ ಹೊರಟುಹೋಯಿತು.

ರಾಜಪುತ್ರಿಯು ದೇವದೂತನನ್ನು "ಅಯ್ಯಾ! ಇಂತಹ ಸಮಯಕ್ಕೆ ಒದಗಿದ ಪರಮೋಪಕಾರಿ ನೀನು ಯಾರು?" ಎಂದು ಕೇಳಿದಳು. ಅವನು "ಅಮ್ಮಾ! ನೀನು ದಿನದಿನವೂ ಪೂಜಿಸುವೆಯಲ್ಲ, ಆ ರಾದೇವನ ದೂತನು ನಾನು. ಆತನಪ್ಪಣೆಯಿಂದ ನಾನು ಬಂದು ಕಾದಿದ್ದೆ. ನೀವಿಬ್ಬರೂ ಇಲ್ಲಿಗೆ ಬೇಟೆಗೆಂದು ಆಗಾಗ ಬರುತ್ತಲೇ ಇದ್ದಿರಿ. ನೀವು ಬಂದಾಗಲೆಲ್ಲ ಈ ಮೊಸಳೆಯು ನಿಮ್ಮ ಶಿಬಿರಕ್ಕೆ ಬಂದು ನಿಮ್ಮ ಗುಡಾರದೊಳಕ್ಕೆ ನುಗ್ಗಿ ಈತನನ್ನು ಎಳೆದುಕೊಂಡು ಓಡಬೇಕೆಂದು ಪ್ರಯತ್ನ ಮಾಡುತ್ತಿತ್ತು. ಅದು ಹಾಗೆ ಮಾಡಬಾರದು ಎಂದು ರಾದೇವನು ನನ್ನನ್ನು ಕಾವಲು ಹಾಕಿದ್ದನು" ಎಂದನು. ಎರಡನೆಯ ಮೃತ್ಯುವೂ ತಪ್ಪಿತೆಂದು ಗಂಡಹೆಂಡಿರು ಬಹು ಸಂತೋಷದಿಂದ ಅರಮನೆಗೆ ಬಂದರು.

ಇದು ಕಳೆದು ಕೆಲವು ತಿಂಗಳಾಯಿತು. ಅತ್ತ ಖುರುವಿನ ರಾಜಪುತ್ರರು ಒಂದು ದಿನ ನಹರಿನಾದೇಶದ ರಾಜಪುತ್ರಿಯ ವಿಚಾರವಾಗಿ ಮಾತನಾಡುತ್ತ "ನಾವು ಅಷ್ಟು ಪ್ರಯತ್ನ ಮಾಡಿದರೂ ಅವಳು ನಮಗೆ ಸಿಕ್ಕಲಿಲ್ಲ. ಆ ದೇಶಬಿಟ್ಟು ಓಡಿ ಬಂದವನು ಅವಳನ್ನು ಮದುವೆಮಾಡಿಕೊಂಡು ಸುಖವಾಗಿದ್ದಾನೆ. ನೋಡಿದಿರಾ?" ಎಂದುಕೊಂಡರು. ಕೊನೆಗೆ ದಂಡೆತ್ತಿ ಹೋಗಿ ಆ ಈಜಿಪ್ಟಿನ ಕುನ್ನಿಯನ್ನು ತೀರಿಸಿಬಿಡಬೇಕು ಎಂದು ಗೊತ್ತುಮಾಡಿಕೊಂಡು ಅದರಂತೆಯೇ ಸೈನ್ಯಸಮೇತರಾಗಿ ಹೊರಟರು.

ಗಂಡಹೆಂಡರಿಗೆ ಕಾವಲಾಗಿದ್ದ ದೇವದೂತನು ಬಂದು ಬೇಟೆಯಲ್ಲಿದ್ದ ಇವರನ್ನು ಕಂಡು "ಸಿರಿಯದ ರಾಜಪುತ್ರರು ದಂಡೆತ್ತಿ ಬಂದು ನಿಮ್ಮ

ದೇಶವನ್ನು ಗೆದ್ದುಕೊಂಡರು. ನೀವು ಅವರನ್ನು ಎದುರಿಸಿ ಬದುಕಲಾರಿರಿ. ಅದರಿಂದ ಈ ಅಪಾಯವು ಕಳೆಯುವವರೆಗೂ ನೀವು ತಲೆ ಮರೆಸಿಕೊಂಡಿರುವುದು ಒಳ್ಳೆಯದು. ಈವೊತ್ತಿಗೆ ನನ್ನ ಅವಧಿಯು ಮುಗಿಯಿತು. ನಾನಿನ್ನು ಹೊರಟುಹೋಗುವೆನು" ಎಂದು ಹೇಳಿ ಹೊರಟುಹೋದನು.

ಇವರೂ ಅದರಂತೆಯೇ ತಲೆ ಮರೆಸಿಕೊಂಡು ಒಂದು ಗವಿಯಲ್ಲಿ ಅವಿತುಕೊಂಡಿದ್ದರು. ಅತ್ತ ಸಿರಿಯದ ಅರಸುಮಕ್ಕಳು ಗುಂಪುಗುಂಪಾಗಿ ಹುಡುಕಿಕೊಂಡು ಹೊರಟು, ಇವರನ್ನು ಎಲ್ಲೆಲ್ಲಿಯೂ ಹುಡುಕಿದರು. ಇಬ್ಬರು ಅರಸುಮಕ್ಕಳು ಇವರು ಅವಿತ್ತಿದ್ದ ಗುಹೆಯ ಒಳಗೇ ಒಂದರು ಅವರ ಕಡೆಯುವರೆಲ್ಲ ಹೊರಟುಹೋದರು. ಕೊನೆಯವನು ಬರುತ್ತಿದ್ದಾಗ, ಅದುವರೆಗೂ ಸುಮ್ಮನಿದ್ದ ನಾಯಿಯು ಅವನ ಮುಖವನ್ನು ಕಂಡು ಬೊಗಳಿ, ಈಚೆಗೆ ಬಂದು ಅವನ ಮೇಲೆ ಬಿತ್ತು. ಇತರರು ಹಿಂದಿರುಗಿ ಬಂದು ನಾಯಿಯ ಗುರುತು ಹಿಡಿದು ಗುಹೆಗೆ ನುಗ್ಗಿದರು. ಗಂಡನನ್ನು ಹಿಂದಕ್ಕೆ ನೂಕಿ ಹೆಂಡತಿಯೇ ಮೇಲೆ ಬಿದ್ದು ಒಬ್ಬನನ್ನು ಕೊಂದಳು. ಅವಳ ಗಂಡನು ಇನ್ನೊಬ್ಬನನ್ನು ಕೊಂದನು. ನಾಯಿಯು ಒಬ್ಬನನ್ನು ಕೊಂದಿತು. ಆದರೂ ಅವರ ಭಲ್ಲೆಗಳು ಇವರನ್ನೆಲ್ಲ ಮುಗಿಸಿದುವು.

ಅವರೆಲ್ಲರೂ ಹೊರಟುಹೋದ ಅಷ್ಟು ಹೊತ್ತಿನ ಮೇಲೆ ಗಂಡನಿಗೆ ಕೊಂಚ ಜ್ಞಾನವು ಬಂದಂತಾಯಿತು: ಕಣ್ಣು ಬಿಟ್ಟು ನೋಡಿ, ಹೆಂಡತಿಯೂ ನಾಯಿಯೂ ತನ್ನ ಮಗ್ಗುಲಲ್ಲಿಯೇ ಸತ್ತು ಬಿದ್ದಿರುವುದನ್ನು ಕಂಡು, "ನಾನು ಯಾರಿಗೂ ಅಪರಾಧ ಮಾಡಿಲ್ಲ. ಯಾವ ಪಾಪವನ್ನೂ ಮಾಡಿಲ್ಲ. ಇದು ನಿಜವೇ ಆದರೆ, ನನ್ನ ಹೆಂಡತಿಗೆ, ನನ್ನ ನಾಯಿಗೆ, ನನಗೆ ಸದ್ಗತಿಯು ಬರಲಿ" ಎಂದು ಪ್ರಾಣಬಿಟ್ಟನು.

ರಾದೇವನಿಗೆ ಇದನ್ನು ನೋಡಿ ಬಹಳ ವ್ಯಥೆಯಾಯಿತು. ಆತನು ಇತರ ದೇವತೆಗಳನ್ನೆಲ್ಲ ಕರೆಯಿಸಿ ಅವರಿಗೆ ತಾನೇ ಹೇಳಿ ಆ ಗಂಡಹೆಂಡರಿಗೂ ನಾಯಿಗೂ ಮತ್ತೆ ಪ್ರಾಣಗಳನ್ನು ಕೊಡಿಸಿ ಬದುಕಿಸಿದನು.

---

# ಹಿರಿಯ ಮಗ

ಒಂದೂರಿನಲ್ಲಿ ಒಬ್ಬ ದೊರೆಯಿದ್ದನು. ಅವನಿಗೆ ಎಷ್ಟು ದಿನವಾದರೂ ಮಕ್ಕಳಾಗಲಿಲ್ಲ. ಅವನಿಗೆ ಅದೇ ಯೋಚನೆಯಾಗಿ ಹೋಗಿತ್ತು.

ಒಂದು ದಿನ ಒಬ್ಬನು ಒಂದು "ದೊರೆಯೇ! ನಾನು ನಿನಗೆ ಮಕ್ಕಳಾಗುವ ಹಾಗೆ ಒಂದು ಔಷಧಿ ಕೊಡುತ್ತೇನೆ. ನಿನ್ನ ಹೆಂಡಿತಿ ಹೆತ್ತರೆ, ಮೊದಲನೆಯ ಮಗುವನ್ನು ನನಗೆ ಕೊಡುತ್ತೀಯಾ?" ಎಂದು ಕೇಳಿದನು. ದೊರೆಗೆ ಏನಾದರೂ ಆಗಲಿ ಮಕ್ಕಳಾದರೆ ಸಾಕು ಎಂದು ಇದ್ದುದರಿಂದ ಅವನು ಆಗಲಿ ಎಂದನು. ಒಂದವನು ಎರಡು ಒಣಗಿದ ಹಣ್ಣುಗಳನ್ನು ತೆಗೆದುಕೊಟ್ಟು "ಈ ಹಸುರದು ನೀನು ತಿಂದು ಈ ಕೆಂಪದು ನಿನ್ನ ಹೆಂಡತಿಗೆ ಕೊಡು" ಎಂದು ಹೇಳಿ ಹೊರಟುಹೋದನು.

ಕೆಲವು ದಿನದಮೇಲೆ ದೊರೆಯ ಹೆಂಡಿತಿಯು ಬಸುರಾಗಿ, ಒಂದು ಗಂಡು ಮಗುವನ್ನು ಹೆತ್ತಳು. ಆದಾದಮೇಲೆ ಇನ್ನೊಂದು, ಇನ್ನೂ ಒಂದು ಹೀಗೆ ಮೂರು ಜನ ಮಕ್ಕಳನ್ನು ಹೆತ್ತಳು. ಮೊದಲನೆಯದಕ್ಕೆ ಮಹಮ್ಮದ್, ಎರಡನೆಯದಕ್ಕೆ ಆಲಿ, ಮೂರನೆಯದಕ್ಕೆ ಏನೋ ಒಂದು ಎಂದು ಹೆಸರಿಟ್ಟರು. ಇವರಲ್ಲೆಲ್ಲ ಮೊದಲನೆಯವನಾದ ಮಹಮ್ಮದ್‌ನು ಬಲು ಬುದ್ಧಿವಂತನಾಗಿ ಇದ್ದನು.

ಹೀಗೆ ಹತ್ತು ವರುಷ ಕಳೆದಮೇಲೆ ಹಣ್ಣು ಕೊಟ್ಟಿದ್ದವನು ಬಂದನು. "ದೊರೆಯೇ! ಎಲ್ಲಿ? ನೀನಾಡಿದ್ದ ಪ್ರಕಾರ ನಿನ್ನ ಮೊದಲನೆಯ ಮಗನನ್ನು ಕೊಡು" ಎಂದನು. ದೊರೆಯು "ಆಗಲಿ. ಹೋಗಿ ಕರೆದುಕೊಂಡು ಬರುತ್ತೇನೆ" ಎಂದು ಹೆಂಡಿತಿಯ ಬಳಿ ಹೋಗಿ ಹಣ್ಣು ಕೊಟ್ಟವನು ಬಂದಿದ್ದಾನೆ ಎಂದನು. ಹೆಂಡಿತಿಯು "ನಾನು ಚೊಚ್ಚಲು ಮಗನನ್ನು ಕೊಡುವುದಿಲ್ಲ. ಇನ್ನು ಯಾರನ್ನಾದರೂ ಒಬ್ಬರನ್ನು ಕರೆದುಕೊಂಡು ಹೋಗಲಿ" ಎಂದಳು. ಅವರಿಬ್ಬರೂ ಮಾತನಾಡಿಕೊಂಡು ಅವನಿಗೆ ಆಲಿಯನ್ನು ಕೊಟ್ಟರು.

ಅವನು ಮರುಮಾತಾಡದೆ ಅವನನ್ನೇ ಕರೆದುಕೊಂಡು ಹೊರಟನು. ದಾರಿಯಲ್ಲಿ ಹೋಗುತ್ತಾ ಸಂಜೆಯವೇಳೆಗೆ "ನಿನಗೆ ಹಸಿವು ಬಾಯಾರಿಕೆ ಆಗುವುದಿಲ್ಲವೇ ?" ಎಂದು ಕೇಳಿದನು. ಅದಕ್ಕೆ ಹುಡುಗನು "ಬೆಳಗಿಂದ ನಡೆದಿದ್ದೇವೆ. ಆದರೂ ನನಗೆ ಹಸಿವೂ ಇಲ್ಲ; ಬಾಯಾರಿಕೆಯೂ ಇಲ್ಲ" ಎಂದನು. ಕೂಡಲೇ ಅವನು ಹಿಂತಿರುಗಿ ಅರಮನೆಗೆ ಬಂದು "ಇವನು ನಿನ್ನ ಹಿರಿಯ ಮಗನಲ್ಲ. ನನಗೆ ಹಿರಿಯ ಮಗನನ್ನು ಕೊಡು" ಎಂದನು.

ಅರಸನು ಯುಕ್ತಿಯಿಲ್ಲದೆ ತನ್ನ ಮೂವರು ಮಕ್ಕಳನ್ನೂ ಕರೆದು ಅವನ ಮುಂದೆ ನಿಲ್ಲಿಸಿ, "ನಿನಗೆ ಬೇಕಾದವರನ್ನು ನೀನೇ ಆರಿಸಿಕೋ" ಎಂದನು. ಅವನು ನೋಡಿ ಮಹಮ್ಮದನನ್ನು ಆರಿಸಿಕೊಂಡು ಕರೆದುಕೊಂಡು ಹೋದನು. ದಾರಿಯಲ್ಲಿ ಹೋಗುತ್ತ "ಏನಯ್ಯಾ? ಹಸಿವಾಗುವುದೋ ಬಾಯಾರಿಕೆಯಾಗುವುದೋ ?" ಎಂದು ಕೇಳಿದನು. ಮಹಮ್ಮದನು "ನಿನಗೆ ಹಸಿವಾದರೆ ನನಗೂ ಹಸಿವಾಗುವುದು. ನಿನಗೆ ಬಾಯಾರಿಕೆಯಾದರೆ ನನಗೂ ಆಗುವುದು" ಎಂದನು. "ಇದೀಗ ಸರಿಯಾದ ಮಾತು. ನೀನು ನನ್ನ ಮಗ" ಎಂದು ಒಪ್ಪಿಕೊಂಡು ಕರೆದುಕೊಂಡು ಹೋದನು.

ಅವನ ಹೆಸರು ಮುಘ್ರಬಿ ಎಂದು. ಅವನು ಉತ್ತರ ಆಫ್ರಿಕಾದಿಂದ ಬಂದಿದ್ದವನು. ಬಹು ದೊಡ್ಡ ಮಂತ್ರವಾದಿ. ಅವನು ನಿಂತಲ್ಲಿಯೇ ಕಾಲು ಝಾಡಿಸಿದನು. ನೆಲವು ಬಾಯಿಬಿಟ್ಟಿತು. ಮಹಮ್ಮದನನ್ನು ಕರೆದುಕೊಂಡು ಆ ಬಿರಿಕಿನಲ್ಲಿ ಇಳಿದು ಹೋದನು. ಹೋದರೆ ಅಲ್ಲಿ ಒಂದು ಭಾರಿಯ ತೋಟ. ಅದರಲ್ಲಿ ಒಂದು ಅರಮನೆ. ಅಲ್ಲಿಗೆ ಈ ಹುಡುಗನನ್ನು ಕರೆದುಕೊಂಡು ಹೋಗಿ ಅವನ ಕೈಗೆ ಒಂದು ಪುಸ್ತಕವನ್ನು ಕೊಟ್ಟು "ಓದು" ಎಂದನು. ಮಹಮ್ಮದನಿಗೆ ಏನೂ ತಿಳಿಯಲಿಲ್ಲ. "ಇನ್ನು ಮೂವತ್ತು ದಿನದೊಳಗಾಗಿ ನೀನು ಈ ಪುಸ್ತಕವನ್ನೆಲ್ಲ ಓದಿರಬೇಕು. ಇಲ್ಲದಿದ್ದರೆ ನಿನ್ನ ತಲೆ ಕಡಿದು ಹಾಕುತ್ತೇನೆ" ಎಂದು ಹೊರಟು ಹೋದನು.

ಮಹಮ್ಮದನು ೨೯ ದಿನಗಳು ಎಷ್ಟೋ ಕಷ್ಟಪಟ್ಟನು. ಏನೂ ಫಲ

ವಾಗಲಿಲ್ಲ. ಕೊನೆಯ ದಿನ ಬೆಳಗೆದ್ದು "ಇಷ್ಟು ದಿನವೂ ಆಗದೆ ಇದ್ದುದು ಈ ದಿನ ಆಗುತ್ತದೆಯೇ? ಹೇಗಿದ್ದರೂ ಸಾಯುವುದು ಖಂಡಿತ. ಈ ದಿನ ಸುಖವಾಗಿದ್ದು ಸಾಯೋಣ" ಎಂದು ತೋಟಕ್ಕೆ ಹೋದನು.

ತೋಟದಲ್ಲಿ ಅಲೆಯುತ್ತಿರುವಾಗ ಒಂದು ವಿಚಿತ್ರವಾಯಿತು. ಅಲ್ಲಿ ಒಂದು ಮರದ ಮೇಲೆ ಒಬ್ಬಳು ಹುಡುಗಿಯನ್ನು ಅವಳ ಕೂದಲಿನಿಂದಲೇ ನೇಣುಹಾಕಿತ್ತು. ಮುಹಮ್ಮದನು ಅವಳನ್ನು ಇದು ಏಕೆ ಎಂದು ವಿಚಾರಿಸಿದನು. ಅವಳು "ಮುಫ್ರಬಿಯು ನನ್ನನ್ನು ನೇತು ಹಾಕಿದ್ದಾನೆ. ನೀನು ಯಾರು?" ಎಂದಳು. ಮುಹಮ್ಮದನು ತನ್ನ ಕಥೆಯೆಲ್ಲವನ್ನೂ ಹೇಳಿದನು. ಅವಳು "ನನ್ನನ್ನು ಇಲ್ಲಿಂದ ಇಳಿಸು. ನಾನು ಪುಸ್ತಕದಲ್ಲಿರುವುದನ್ನು ಹೇಳಿಕೊಡುತ್ತೇನೆ. ಆದರೆ ಅವನು ಬಂದು ಕೇಳಿದಾಗ ನನಗೇನೂ ಬರುವುದಿಲ್ಲ ಎಂದು ಹೇಳು" ಎಂದು ಹೇಳಿಕೊಟ್ಟಳು.

ಮುಹಮ್ಮದ್‌ನು ಅವಳ ಕೂದಲು ಗಂಟುಬಿಚ್ಚಿ ಅವಳನ್ನು ಕೆಳಗೆ ಇಳಿಸಿಕೊಂಡನು. ಅವಳು ಆ ಪುಸ್ತಕದಲ್ಲಿದ್ದ ಮಂತ್ರಗಳನ್ನೆಲ್ಲ ಹೇಳಿಕೊಟ್ಟಳು. ಮರುದಿವಸ ಮುಫ್ರಬಿಯು ಬರುವವೇಳೆಗೆ ಮತ್ತೆ ಅವಳನ್ನು ಹಾಗೆಯೇ ಕಟ್ಟಿ ತಾನು ಪುಸ್ತಕದ ಮುಂದೆ ಕುಳಿತಿದ್ದನು. ಅವನು ಬಂದು "ಏನು? ಓದಿದೆಯಾ?" ಎಂದನು. ಇವನು "ಒಂದು ಅಕ್ಷರವೂ ಇಲ್ಲ" ಎಂದನು. ಅವನು ಕತ್ತಿಯನ್ನು ಹಿರಿದು ಒಂದೇ ಏಟಿಗೆ ಬಲಗೈಯನ್ನು ಕತ್ತರಿಸಿ ಹಾಕಿ ಇನ್ನು ಮೂವತ್ತು ದಿನಗಳು ಕೊಟ್ಟಿದ್ದೇನೆ. ಅಷ್ಟರೊಳಗಾಗಿ ಕಲಿತಿರಬೇಕು. ಇಲ್ಲದಿದ್ದರೆ ನಿನ್ನ ತಲೆಯನ್ನು ಕಡಿದುಬಿಡುತ್ತೇನೆ" ಎಂದು ಹೇಳಿ ಹೊರಟುಹೋದನು.

ಅವನು ಅತ್ತಕಡೆ ಹೋಗುತ್ತಲೂ ಇತ್ತಕಡೆ ಮುಹಮ್ಮದ್‌ನು ಪುಸ್ತಕದಿಂದ ಒಂದು ಮಂತ್ರವನ್ನು ಓದಿದನು. ಕೂಡಲೆ ಕಡದಿದ್ದ ಕೈಯ್ಯು ಮೊದಲಿನಂತೆ ಆಯಿತು. ಅವನು ಬಂದು ಹುಡುಗಿಯ ಸೆರೆಬಿಡಿಸಿ ಇಬ್ಬರೂ ತೋಟದಲ್ಲಿ ಸುತ್ತಾಡಿಕೊಂಡು ಬರೋಣ ಎಂದು ಹೊರಟರು.

ಅವರು ಹೀಗೆಯೇ ಸುತ್ತುತ್ತಿರುವಾಗ ಮೂರು ಹಾಳೆಗಳು ಸಿಕ್ಕಿದವು. ಅವನ್ನು ಮಂತ್ರವಾದಿಯು ಸಲವತ್ತು ವರ್ಷಗಳಿಂದ ಹುಡುಕುತ್ತಿದ್ದನು. ಆ ಹಾಳೆಗಳ ತುಂಬ ಮಂತ್ರಗಳೇ! ಮೊದಲನೆಯ ಮಂತ್ರ ಹೇಳುತ್ತಿದ್ದ ಹಾಗೆಯೇ ಇಬ್ಬರೂ ಸೆಲದ ಮೇಲಕ್ಕೆ ಬಂದರು. ಅಲ್ಲಿ ಎರಡು ಕುದುರೆಗಳೂ ಸಿದ್ಧವಾಗಿದ್ದವು. ಇಬ್ಬರೂ ತಮ್ಮ ತಮ್ಮ ತಂದೆ ಮನೆಗೆ ಹೋದರು.

ಮುಘ್ರಬಿಯು ಮತ್ತೆ ಮೂವತ್ತೊಂದನೆಯ ದಿನ ಬಂದನು. ಆದರೆ ಅಲ್ಲಿ ಒಬ್ಬರೂ ಇಲ್ಲ. ಸರಿ, ಅವನಿಗೆ ತಿಳಿಯಿತು. "ಎಲೆಲಾ! ಇವನು ತಾನು ಓಡಿಹೋಗುವುದರ ಜೊತೆಗೆ ಅವಳನ್ನು ಹೊತ್ತುಕೊಂಡುಹೋಗಿದ್ದಾನೆ ಇರಲಿ, ಇವನಿಗೆ ನನ್ನ ಕೈವಾಡ ತೋರಿಸುತ್ತೇನೆ" ಎಂದು ಹಟ ತೊಟ್ಟುಕೊಂಡು ಭೂಮಿಗೆ ಬಂದನು.

ಅತ್ತ ಮಹಮ್ಮದ್‌ನು ಸುಮ್ಮನಿರಲಿಲ್ಲ. ತಾಯಿಯನ್ನು ಕರೆದು "ಅಮ್ಮಾ! ಒಂದು ತಮಾಷೆ ಮಾಡೋಣ, ಬಾ" ಎಂದು ಅವಳಿಗೆ ತನ್ನ ಮಂತ್ರದಿಂದ ಒಂದು ಸೊಗಸಾದ ಕುರಿಮಾಡಿಕೊಟ್ಟು "ಹೋಗಿ ಮಾರಿಕೊಂಡು ಬಾ. ಆದರೆ ಕುರಿಕಟ್ಟಿರುವ ಹಗ್ಗಮಾತ್ರ ತೆಗೆದುಕೊಂಡು ಬಾ" ಎಂದು ಕಳುಹಿಸಿದನು.

ಆಕೆಯು ಹೋಗಿ ಕುರಿಯನ್ನು ಸಂತೆಯಲ್ಲಿ ಮಾರಿದಳು. ಕೊಂಡುಕೊಂಡವನು ಅದನ್ನು ತಾರೀಫು ಮಾಡುತ್ತ ತೆಗೆದುಕೊಂಡು ಹೋದನು. ದಾರಿಯಲ್ಲಿ ಕುರಿಯು ಅರಚಿತು. ಬಾಯಾರಿಕೆಯಾಗಿರಬೇಕು ಎಂದು ನೀರಿನ ತೊಟ್ಟಿ ಹತ್ತಿರಕ್ಕೆ ಕರೆದುಕೊಂಡು ಹೋದರೆ, ಕುರಿಯು ತೊಟ್ಟಿಯೊಳಕ್ಕೆ ಹಾರಿ ಮಂಗರಮಾಯವಾಗಿ ಹೋಯಿತು.

ಕುರಿ ಮಾಯವಾದ ಸುದ್ದಿ ಊರಲ್ಲೆಲ್ಲ ಹರಡಿತು. ಮುಘ್ರಬಿಯು ಇದನ್ನು ಕೇಳಿ "ಸರಿ ಈ ಕೆಲಸ ಮಹಮ್ಮದ್‌ನದು. ಇನ್ನು ಯಾರದೂ ಅಲ್ಲ. ಸಿಕ್ಕಿದ" ಎಂದು ಕಾದು ಕುಳಿತನು.

ಮರುದಿನ ಮಹಮ್ಮದ್‌ನು ಒಂದು ಮಾಯದ ಒಂಟೆ ಮಾಡಿ ತಾಯ

ಕೈಯಲ್ಲಿ ಕೊಟ್ಟು ಮಾರಿಕೊಂಡು ಬಾ ಎಂದು ಕಳುಹಿಸಿದನು. ಸಂತೆಯ ಮಾಳದಲ್ಲಿ ಮುಘ್ರಾಬಿಯು ಕಾದು ಕುಳಿತಿದ್ದನು. "ಏನಮ್ಮಾ ಒಂಟಿ ಕೊಡುವಿಯಾ?" ಎಂದು ತಾನೇ ಕೇಳಿದನು. ಅವಳು "ಎಷ್ಟು ಕೊಡು ವಿರಿ?" ಎಂದಳು. "ಐದು ಸಾವಿರ ಮಹಬೂಬಿ. ಕೊಡುವೆಯಾ?" ಎಂದನು. (ಮಹಬೂಬಿ ಎಂದರೆ ಚಿನ್ನದನಾಣ್ಯ. ಸುಮಾರು ಹತ್ತು ರೂ. ಬಾಳುವುದು.) ಅವಳು "ನಿಮ್ಮ ಭಾಗ್ಯ ಬೆಳೆಯಲಿ, ತೆಗೆದುಕೊಳ್ಳಿ. ಆದರೆ, ಈ ಹಗ್ಗ ನನ್ನದು. ಇದನ್ನು ಕೊಡವ್ರದಿಲ್ಲ" ಎಂದಳು. ಮುಘ್ರಾಬಿಯು "ಏನಮ್ಮಾ ಇಷ್ಟು ದೊಡ್ಡ ಒಂಟಿ ಕೊಟ್ಟವಳಿಗೆ ಈ ಹಗ್ಗ ಒಂದು ಹೆಚ್ಚೋ? ಹೋಗಲಿ. ಅದಕ್ಕೂ ಒಂದು ನೂರುಹೊನ್ನು ತೆಗೆದುಕೋ" ಎಂದು ಹಣವೆಲ್ಲ ಕೊಟ್ಟು ಒಂಟಿಯನ್ನು ಹಗ್ಗದೊಡನೆ ತೆಗೆದುಕೊಂಡನು.

ಮುಘ್ರಾಬಿಯು ಆ ಹಗ್ಗವನ್ನು ಮುದುರಿ ತನ್ನ ಚೀಲದೊಳಕ್ಕೆ ಹಾಕಿಕೊಳ್ಳುತ್ತಿರುವಾಗ ಹಗ್ಗವು ಥಟ್ಟನೆ ಕಾಗೆಯಾಗಿ ಹಾರಿಯೋಯಿತು. ಮಂತ್ರವಾದಿಯು ಹದ್ದಾಗಿ ಅದನ್ನು ಓಡಿಸಿಕೊಂಡು ಹೋದನು. ಎಲ್ಲೆಲ್ಲಿ ಹೋದರೂ ಆ ಹದ್ದು ತನ್ನನ್ನು ಅಟ್ಟಿ ಬರುತ್ತಿರಲು, ಮಹಮ್ಮದನು ಥಟ್ಟನೆ ಒಂದು ತೋಟದೊಳಕ್ಕೆ ಹೋಗಿ ಅಲ್ಲಿ ಒಂದು ದಾಳಿಂಬರೆ ಹಣ್ಣಾಗಿ ಗಿಡಕ್ಕೆ ಹತ್ತಿಕೊಂಡನು.

ಮುಘ್ರಾಬಿಯು ಆ ತೋಟವು ಆ ಊರಿನ ಅರಸನದು ಎಂದು ಗೊತ್ತುಮಾಡಿಕೊಂಡು ಅರಸನ ಬಳಿಗೆ ಹೋಗಿ "ದೊರೆಯೇ! ನಿಮ್ಮ ತೋಟದಲ್ಲಿ ಒಂದು ದಾಳಿಂಬರೆ ಹಣ್ಣಿದೆ, ನನಗೆ ಔಷಧಿಗೆ ಬಹಳ ಬೇಕಾಗಿದೆ, ದಯವಿಟ್ಟು ಕೊಡಿಸಿಕೊಡಬೇಕು" ಎಂದನು.

ದೊರೆಯು "ಈ ಕಾಲದಲ್ಲಿ ದಾಳಿಂಬರೆ ಹಣ್ಣು ಎಂದರೇನು? ಆಗಲಿ, ಇದ್ದರೆ ಕೊಡಿಸುತ್ತೇನೆ" ಎಂದು ತೋಟಕ್ಕೆ ಆಳು ಕಳುಹಿಸಿದನು. ಅಲ್ಲಿ ಒಂದು ಹಣ್ಣು ಇತ್ತು. ಅದನ್ನು ಆಳು ತಂದನು. ಎಲ್ಲರೂ ಈ ಕಾಲದಲ್ಲಿ ಇಂತಹ ಹಣ್ಣು ಎಲ್ಲಾದರೂ ಉಂಟೆ?" ಎಂದು ಆಶ್ಚರ್ಯಪಡುತ್ತಿದ್ದರು.

ಅರಸನು ಆ ಹಣ್ಣನ್ನು ಕೊಡಲಾರದೆ ಕೊಡಲಾರದೆ ತೆಗೆದು ಮಂತ್ರವಾದಿಯ ಕೈಗೆ ಕೊಟ್ಟನು. ಅವನ ಕೈಗೆ ಹೋಗುತ್ತಿದ್ದ ಹಾಗೆಯೇ ಹಣ್ಣು ಛಳಾರನೆ ಒಡೆಯಿತು. ಅದರಲ್ಲಿದ್ದ ಕಾಳುಗಳೆಲ್ಲ ಚೆಲ್ಲಾಪಿಲ್ಲಿಯಾಗಿ ರಾಜನ ದರ್ಬಾರಿನಲ್ಲಿ ಈ ಕೊನೆಯಿಂದ ಆ ಕೊನೆಯವರೆಗೂ ಹರಡಿ ಹೋದವು. ಮುಫ್ರುಬಿಯೂ ಕೂಡಲೇ ಭಾರಿಯ ಹುಂಜನಾಗಿ ಆ ಕಾಳುಗಳನ್ನೆಲ್ಲ ಆದು ಆದು ನುಂಗುತ್ತಾ ಬಂದನು. ಅಲ್ಲಿದ್ದವರೆಲ್ಲ ಕಕ್ಕುಬಿಕ್ಕಾಗಿ ಇದೇನಿದು ಎಂದು ನೋಡುತ್ತಿದ್ದರು.

ಕೊನೆಗೆ ಮುಹಮ್ಮದ್‌ನು ಯಾವ ಕಾಳಿನಲ್ಲಿ ಇರುವನು ಎಂಬುದನ್ನು ತಿಳಿದು ಕೋಳಿಯು ಅಲ್ಲಿಗೆ ಓಡಿತು. ಅಲ್ಲಿಗೆ ಅದು ಬರುತ್ತಿದ್ದ ಹಾಗೆಯೇ ದಾಳಿಂಬರೆಯ ಬೀಜವು ಕಠಾರಿಯಾಗಿ ಕೋಳಿಯನ್ನು ಇರಿದುಬಿಟ್ಟಿತು. 'ಹಾ' ಎಂದು ಕೂಗುತ್ತ ಮನುಷ್ಯನಾಗಿ ಕೆಳಗೆ ಬಿದ್ದು ಸತ್ತಿತು. ನೋಡಿದರೆ ಮುಫ್ರುಬಿ.

ಮುಹಮ್ಮದ್‌ನು ಮತ್ತೆ ತನ್ನ ನಿಜರೂಪದಿಂದ ಅರಸನ ಎದುರು ನಿಂತನು. "ಮನುಷ್ಯನನ್ನು ಕೊಂದಿದ್ದಾನೆ, ಹಿಡಿದು ಗಲ್ಲಿಗೆ ಹಾಕಿ" ಎಂದು ಅರಸನು ಕೂಗಿದನು. ಮುಹಮ್ಮದ್‌ನು "ಅರಸಾ! ಇವನು ಮಂತ್ರವಾದಿಯು. ಇವನೇ ನಿಮ್ಮ ಮಗಳನ್ನು ಹೊತ್ತುಕೊಂಡು ಹೋಗಿದ್ದವನು. ನಾನು ಅವಳನ್ನು ಬಿಡಿಸಿದೆನು. ಹೌದೋ ಅಲ್ಲವೋ ನಿಮ್ಮ ಮಗಳನ್ನು ಕರೆಸಿ ಕೇಳಿ" ಎಂದನು.

ಅರಸು ತನ್ನ ಮಗಳನ್ನು ಕರೆಸಿದನು. ಅವಳು ಮಂತ್ರವಾದಿಯು ತನ್ನ ಕೂದಲಿನಿಂದಲೇ ತನ್ನನ್ನು ನೇತುಹಾಕಿದ್ದುದು; ಈ ರಾಜಪುತ್ರನು ಬಂದು ತನ್ನನ್ನು ಬಿಡಿಸಿದುದು ಎಲ್ಲವನ್ನು ಹೇಳಿದಳು.

ದೊರೆಯು ಸಂತೋಷಪಟ್ಟು, "ನಿನ್ನ ಕೂದಲನ್ನು ಮುಟ್ಟಿ ನಿನ್ನನ್ನು ಬಂಧನದಿಂದ ಬಿಡಿಸಿದವನನ್ನೇ ನೀನು ಮದುವೆಯಾಗುವುದು ನ್ಯಾಯ"

ಎಂದು ಖಾಜಿಯನ್ನು ಕರೆಸಿ ಒಳ್ಳೆಯ ಶುಭ ಮುಹೂರ್ತದಲ್ಲಿ ಇಬ್ಬರಿಗೂ ಮದುವೆ ಮಾಡಿಸಿದನು.

ಮಹಮ್ಮದ್‌ನು ತನ್ನ ಹೆಂಡತಿಯನ್ನು ಕರೆದುಕೊಂಡು ತನ್ನ ರಾಜ್ಯಕ್ಕೆ ಹೋಗಿ ತಂದೆತಾಯಿಗಳೊಡನೆ ಸುಖವಾಗಿದ್ದನು.

---

## ಅಕ್ಷಯಪಾತ್ರೆ

ಫಿಲೋಮನ್‌ನೂ ಅವನ ಹೆಂಡತಿ ಬೋಸಿಸ್ಸಳೂ ಮನೆಯ ಬಾಗಿಲಲ್ಲಿ ಕುಳಿತು ಮಾತನಾಡುತ್ತಿದ್ದರು. ಇಬ್ಬರೂ ಮುದುಕರು. ಹಣ್ಣು ಹಣ್ಣು ಮುದುಕರು. ಆದರೂ ಅವರಿಗೆ ಕಣ್ಣೂ ಕಿವಿಯೂ ಚೆನ್ನಾಗಿತ್ತು. ದೂರದಲ್ಲಿ ನಾಯಿ ಬೊಗಳಿದ ಸದ್ದು ಕೇಳಿಸಿತು.

"ಸರಿ. ಅಗೋ! ನಾಯಿಗಳ ಸದ್ದು. ಮಕ್ಕಳೂ ಕೂಗಾಡುತ್ತಿವೆ. ಯಾರೋ ದಾರಿಹೋಕರು ಇತ್ತ ಬಂದರೇನೋ?"

"ನೀವು ಬೇಕಾದ್ದು ಹೇಳಿ. ನಾವು ಈ ಊರು ಬಿಟ್ಟು ಹೊರಗಿರುವುದು ನಮಗೆಷ್ಟೋ ಕ್ಷೇಮ! ಎಲ್ಲಾದರೂ ಉಂಟೆ? ಯಾರಾದರೂ ಬಂದರೆ, ಅವರ ಮೇಲೆ ನಾಯಿ ಬಿಡುವುದೇನು? ಊರ ಮಕ್ಕಳೆಲ್ಲ ಅವರನ್ನು ಗೇಲಿ ಮಾಡುವುದು ಎಂದರೇನು? ನಿಜವಾಗಿಯೂ ನಮ್ಮೂರಿನವರಿಗೆ ಬುದ್ಧಿಯಿಲ್ಲ."

"ಅದೆಷ್ಟು ಸಲ ಹೇಳಿದರೂ ಸಾಲದು. ಅಂದು ನಾವೇಕೆ ಬಾಯಿ ನೋಯಿಸಿಕೊಳ್ಳಬೇಕು? ನೀನು ಏಳು. ಹೋಗಿ ರೊಟ್ಟಿಗಿಟ್ಟಿ ನೋಡು. ಅವರೂ ಇತ್ತಕಡೆಯೇ ಬಂದಂತಿದೆ. ಹೋಗಿ ಅವರನ್ನು ಕರೆದುಕೊಂಡು ಬರುತ್ತೇನೆ. ಯಾರೋ ಏನೋ ಪಾಪ!" ಎಂದು ಮುದುಕನು ಎದ್ದು ಹೊರಟನು: ಮುದುಕಿಯು ಮನೆಯೊಳಕ್ಕೆ ಹೋದಳು.

ಮುದುಕನು ಅಷ್ಟು ದೂರ ಹೋಗುವುದರೊಳಗಾಗಿ ಇಬ್ಬರು

ಪ್ರಯಾಣಿಕರು ಎದುರಾಗಿ ಬಂದರು. ಅವರಲ್ಲಿ ಒಬ್ಬನು ಕಿರಿಯನು. ಇನ್ನೊಬ್ಬನು ಹಿರಿಯನು. ಕಿರಿಯನು ಕೈಯಲ್ಲಿದ್ದ ಕೋಲಿನಿಂದ ನಾಯಿಗಳನ್ನು ಓಡಿಸಿದ್ದನು. ಇಬ್ಬರೂ ಮುದುಕನ ಮನೆಯಿದ್ದ ದಿಕ್ಕನ್ನೇ ಹತ್ತಿ ಬರುತ್ತಿದ್ದರು.

ಮುದುಕನೇ ಮುಂದೆ ಬಂದು ಮಾತನಾಡಿಸಿದನು: "ನೋಡಿದರೆ ಈ ಊರಿಗೆ ಹೊಸಬರಂತೆ ತೋರುತ್ತೀರಿ. ಯಾರೋ ಏನೋ ನಾನು ಎಂದೂ ಕಂಡಂತಿಲ್ಲ. ಪಾಪ! ನಮ್ಮ ಊರಿಗೆ ಬಂದು ನೊಂದಿದ್ದೀರಿ. ಸಂಜೆಯೂ ಆಗಿದೆ. ನೀವು ನಿಲ್ಲುವುದಾದರೆ, ನಮ್ಮ ಮನೆಗೆ ಬನ್ನಿ. ಈ ರಾತ್ರಿ ಇಲ್ಲಿಯೇ ತಂಗಿದರೆ ಸಂತೋಷ. ಸಾಧ್ಯವಿಲ್ಲದಿದ್ದರೆ ಏನೋ ಒಂದಿಷ್ಟು ತಿಂದು ಒಂದು ಗಳಿಗೆ ಕೂತಿದ್ದಾದರೂ ಮುಂದಕ್ಕೆ ಹೋಗುವಿರಂತೆ ಬನ್ನಿ."

ಹಿರಿಯನು ಕಿರಿಯನ ಮುಖ ನೋಡಿದನು. ಕಿರಿಯನು ಮಾತನಾಡಿದನು, "ಏನು! ಯಜಮಾನರೇ! ನಿಮ್ಮ ಊರಿನವರು ಮಕ್ಕಳಿಗೆ ಒಳ್ಳೆಯ ಬುದ್ಧಿ ಕಲಿಸಿದ್ದಾರೆ. ಹೊರಗಿನಿಂದ ಯಾರಾದರೂ ಬಂದರೆ, ಅವರ ಕಷ್ಟಸುಖ ವಿಚಾರಿಸುವುದು ಬಿಟ್ಟು ಅವರ ಮೇಲೆ ನಾಯಿ ಬಿಟ್ಟು ಕಲ್ಲೆಸೆಯುವುದೇ?"

"ದೇವರು, ಅವರು ಕೆಟ್ಟರು. ಅವರ ಮಾತೇಕೆ? ಸದ್ಯಕ್ಕೆ ಅವರು ಹಾಗೆ ಮಾಡಿದರೋ, ತಾವು ದೇವರ ಹಾಗೆ ನಮ್ಮ ಬಾಗಿಲವರೆಗೂ ಬಂದಿರಿ, ಇಲ್ಲದಿದ್ದರೆ ತಾವೇಕೆ ಇಲ್ಲಿಗೆ ಬರುತ್ತಿದ್ದಿರಿ? ಮುಖ್ಯ ನಮಗೆ ತಮ್ಮ ಉಪಚಾರಮಾಡುವ ಭಾಗ್ಯವಿತ್ತು. ಆದರಿಂದ ದೇವರು ಅವರಿಗೆ ಆ ಬುದ್ಧಿ ಕೊಟ್ಟ" ಎಂದು ಏನೇನೋ ಒಳ್ಳೆಯ ಮಾತನಾಡಿಕೊಂಡು ಮನೆಗೆ ಕರೆದುಕೊಂಡು ಬಂದನು. ಬೋಸಿಸ್ಸಳು ಬಿಸಿನೀರು ಕಾಲಿಗೆರೆದು, ಕಾಲು ಒರೆಸಿಕೊಳ್ಳುವುದಕ್ಕೆ ಚೌಕ ಕೊಟ್ಟು, ಉಪಚರಿಸಿದಳು. ಗಂಡನನ್ನು ಕರೆದು ಪಿಸು ಮಾತಿನಲ್ಲಿ "ಯಾರಿವರು?" ಎಂದು ಕೇಳಿದಳು. "ನಾನು ದಾರಿಯುದ್ದಕ್ಕೂ ಕೇಳಿದೆ. ಆತನು ಅವರೂರಿನ ಯಜಮಾನನಂತೆ. ಇವನು ಆತನ ಆಳಂತೆ.

ಇನ್ನೇನೂ ಹೇಳಲಿಲ್ಲ" ಎಂದನು. ಅವರು ಹೀಗೆ ಮಾತನಾಡುತ್ತಿರುವಾಗಲೇ, ಆ ಕಿರಿಯನ ಕೈಲಿದ್ದ ಕೋಲು ಪುಟಪುಟನೆ ಹಾರಿ ಮೆಟ್ಟಲು ಹತ್ತಿ ಹೋಗಿ ಮೂಲೆಯಲ್ಲಿ ನಿಂತಿತು. ಎರಡು ಹಾವು ಹೊಸೆದಿದ್ದ ಹಾಗೆ ಕಾಣುತ್ತಿದ್ದ ಕೋಲು, ಅದಕ್ಕೆ ತಲೆಯ ಮೇಲೆ ಎರಡು ರೆಕ್ಕೆ. ರೆಕ್ಕೆಯೂ ಆಡಿದ ಹಾಗೆ ಕಾಣಿಸಿತು. ಅದನ್ನು ಕಂಡ ಹೆಂಡತಿಯು ಗಂಡನಿಗೆ ತೋರಿಸಿದಳು. ಇಬ್ಬರೂ ಅದನ್ನು ಕಂಡು ಆಶ್ಚರ್ಯಪಡುತ್ತಿದ್ದರೆ, ಕಿರಿಯನು " ಹೌದು ! ಹೌದು ! ಈ ಕೋಲು ಆಗಾಗ ಹೀಗೆ ವಿಚಿತ್ರಮಾಡುವುದುಂಟು " ಎಂದು ನಕ್ಕನು. ಮುದುಕರು ಮುಂದೆ ವಿಚಾರಿಸಲಿಲ್ಲ.

ಎಲ್ಲರೂ ಊಟಕ್ಕೆ ಕುಳಿತರು. ಆವೊತ್ತೋ ಮನೆಯಲ್ಲಿ ಎಲ್ಲವೂ ತುಂಬಿ ಹೋಗಿದೆ. ಹಾಲು ಕೂಡ ಒಂದೇ ಲೋಟ ಇದೆ. ಅವರೇನು ಮಾಡುವರು ! ಪಾಪ ! ಕೊನೆಗೆ ಮುದುಕಿಯು ಇದ್ದ ಎರಡು ರೊಟ್ಟಿ ಮುರಿದು ನಾಲ್ಕು ಜನರಿಗೂ ಇಟ್ಟಳು. ತಮ್ಮ ಗಿಡದಲ್ಲಿ ಬಿಟ್ಟಿದ್ದ ಒಂದು ಸಣ್ಣ ಗೊಂಚಲು ದ್ರಾಕ್ಷಿಯ ಹಣ್ಣು ಒಂದು ತಟ್ಟೆಯಲ್ಲಿ ಇಟ್ಟಳು. ಇದ್ದಷ್ಟು ಹಾಲಿನಲ್ಲಿ ತಾವಿಬ್ಬರೂ ಒಂದೊಂದು ತೊಟ್ಟು ಬಿಟ್ಟುಕೊಂಡು ಮಿಕ್ಕುದನ್ನು ಅವರಿಬ್ಬರಿಗೂ ಕೊಟ್ಟಳು.

ಮುದುಕನು " ಸ್ವಾಮಿ ! ಬಡವರ ಮನೆಗೆ ಭಾಗ್ಯಲಕ್ಷ್ಮಿಯ ಹಾಗೆ ಬಂದಿದ್ದೀರಿ. ಇದ್ದುದರಲ್ಲಿ ತೃಪ್ತಿಪಟ್ಟುಕೊಳ್ಳಿ" ಎಂದು ಉಪಚಾರ ಹೇಳಿದನು. ಹಿರಿಯನು, " ಚೆನ್ನಾಯಿತು. ಚೆನ್ನಾಯಿತು. ನಾವು ಇದುವರೆಗೆ ಇಂತಹ ರೊಟ್ಟಿಯನ್ನೇ ತಿಂದಿರಲಿಲ್ಲ. ರೊಟ್ಟಿ ಬಲು ಪಸಂದಾಗಿದೆ. ಇನ್ನಷ್ಟು ಇದೆಯೇ ? ಇವೊತ್ತು ಬಲು ದೂರ ತಿರುಗಿ ಹೊಟ್ಟೆ ಚುರುಕಾಗಿದೆ" ಎಂದನು. ಹೆಂಡತಿಯು ಗಂಡನ ಮೊಕ ನೋಡಿ ತನಗೆ ಇಟ್ಟುಕೊಂಡಿದ್ದ ರೊಟ್ಟಿಯನ್ನೇ ತಂದು ಬಡಿಸಿದಳು.

ಕಿರಿಯನು " ಈ ಹಾಲಂತೂ ಅಮೃತವಿದ್ದ ಹಾಗೆ ಇದೆ. ಇನ್ನಷ್ಟು ಕೊಡುವಿರಾ ? " ಎಂದನು. ಮುದುಕಿಯು ತನ್ನ ಪಾಲಿನ ಹಾಲನ್ನೂ

ತಂದು ಬಡಿಸಿದಳು. ಹಿರಿಯನು "ಏನಯ್ಯಾ? ನನಗೂ ಅಷ್ಟು ಕೊಡು" ಎಂದನು. ಮುದುಕಿಯು ಏನುಮಾಡಿಯಾಳು? ಹಾಲಿನ ಪಾತ್ರೆ ಬರಿದಾಗಿದೆ. ಬಲು ನೊಂದುಕೊಂಡಳು. ಕಿರಿಯನು "ಏಕೆ ಅಜ್ಜೀ! ಯೋಚಿಸುತ್ತೀರಿ. ಹಾಲಿನ ಪಾತ್ರೆ ಇಲ್ಲಿ ಕೊಡಿ. ಅದರಲ್ಲಿ ಇನ್ನೂ ಇದೆ ಎನ್ನುವ ಹಾಗಿದೆ" ಎಂದು ಹಾಲಿನ ಪಾತ್ರೆಯನ್ನು ತಾನೇ ಈಸಿಕೊಂಡು ಬಗ್ಗಿಸಿದನು. ಅದರಿಂದ ಶುದ್ಧವಾದ ಹಾಲು ನೊರೆನೊರೆಯಾಗಿ ಆಗತಾನೇ ಕರೆದ ಹಾಗೆ ಸುರಿಯಿತು.

ಮುದುಕಿಯು "ಎಲ್ಲೋ ನನಗೆ ಭ್ರಾಂತಿ. ತಳದಲ್ಲಿ ಇತ್ತೋ ಏನೋ? ನನ್ನ ಕಣ್ಣಿಗೆ ಕಾಣಿಸಿರಲಿಲ್ಲ" ಎಂದುಕೊಂಡಳು.

ಹಿರಿಯನು "ಹೌದಯ್ಯಾ! ಹಾಲು ಅಮೃತದ ಹಾಗಿದೆ. ಇನ್ನಷ್ಟು ಬೇಕಯ್ಯಾ?" ಎಂದು ತನ್ನ ಬಟ್ಟಲನ್ನು ಮುಂದೆ ಚಾಚಿದನು. "ಇನ್ನಷ್ಟು ಎಂದು ಸಂಕೋಚವೇಕೆ? ಬೇಕಾದರೆ ಒಂದು ಬಿಂದಿಗೆಯಷ್ಟಿದೆ" ಎಂದು ಕಿರಿಯನು ಇನ್ನೂ ಒಂದು ಬಟ್ಟಲು ಹೊಯ್ದು ತನ್ನ ಬಟ್ಟಲಿಗೂ ಹೊಯ್ದುಕೊಂಡನು.

ಅಲ್ಲಿಯವರೆಗೂ ಗಂಡಹೆಂಡಿರು ಸುಮ್ಮನೆ ಒಬ್ಬರ ಮುಖ ಒಬ್ಬರು ನೋಡಿಕೊಳ್ಳುತ್ತಿದ್ದವರು, "ಇದೇನೋ ವಿಚಿತ್ರ! ನಿಜವಾಗಿಯೂ ಇವರು ಯಾರೋ ಮಹಿಮಾಶಾಲಿಗಳು" ಎಂದು ಹೆದರಿ ಮನಸ್ಸಿನಲ್ಲಿಯೇ ನಮಸ್ಕಾರಮಾಡಿದರು.

ದ್ರಾಕ್ಷಿಯ ಹಣ್ಣೂ ಹಾಗೆಯೇ ಆಯಿತು. ಹಿರಿಯನು "ಅಯ್ಯಾ! ಇಂತಹ ಹಣ್ಣು ಇದುವರೆಗೆ ತಿಂದಿದ್ದೆಯಾ? ನೋಡು" ಎಂದು ಕಿರಿಯನಿಗೆ ಒಂದೆರಡು ಹಣ್ಣು ಕೊಟ್ಟನು. ಫಿಲೋಮನನಿಗೂ ಒಂದೆರಡು ಕೊಟ್ಟನು. ಫಿಲೋಮನನು ಒಂದು ಹಣ್ಣು ಬಾಯಿಗೆ ಹಾಕಿಕೊಂಡು ಚಪ್ಪರಿಸಿದನು. ನಿಜವಾಗಿಯೂ ಅಮೃತವಿದ್ದ ಹಾಗೆ ಇತ್ತು. ತನ್ನಲ್ಲಿದ್ದ ಇನ್ನೊಂದು ಹಣ್ಣು ಹೆಂಡತಿಯ ಕೈಗೆ ಕೊಟ್ಟನು. ಅವಳೂ ಬಾಯಿಗೆ ಹಾಕಿಕೊಂಡಳು

ಚಪ್ಪರಿಸಿದಳು. ಅವಳಿಗೂ ಆಶ್ಚರ್ಯವಾಯಿತು. ತನ್ನ ಗಂಡನೇ ಹೋಗಿ ಕೈಯಾರ ಕೊಯ್ದು ತಂದಿದ್ದ ಹಣ್ಣು. ದಿನದಿನವೂ ತಾವು ಹಣ್ಣು ತರುತ್ತಿದ್ದ ಗಿಡದ್ದೇ ಹಣ್ಣು. ಅವಳು ನಂಬಲಾರದೆ ಹೋದಳು.

ಮರುದಿನ ಬೆಳಗಾಯಿತು. ಬೆಳಕು ಹರಿಯುತ್ತಿದ್ದ ಹಾಗೆಯೇ ಆ ಇಬ್ಬರು ಹೊಸಬರು ಗಂಡಹೆಂಡಿರನ್ನು ಕರೆದು "ಬನ್ನಿ. ನಮ್ಮನ್ನಷ್ಟು ದೂರ ಬಿಟ್ಟು ಬರುವಿರಂತೆ!" ಎಂದು ಹೇಳಿ ಕರೆದುಕೊಂಡು ಹೊರಟರು. ಅವರೊಡನೆ ಆ ಮಾತು ಈ ಮಾತು ಆಡುತ್ತ ಮಗ್ಗುಲಲ್ಲಿದ್ದ ಬೆಟ್ಟದ ಮೇಲಿನವರೆಗೂ ಕರದುಕೊಂಡು ಹೋದರು. ಅಲ್ಲಿ ನಿಂತುಕೊಂಡು ಮಾತನಾಡುತ್ತಾ, "ನಿಮ್ಮ ಊರು ಎಲ್ಲಿ ನೋಡಿ" ಎಂದರು. ಮುದುಕರು ನೋಡುತ್ತಾರೆ. ನಿನ್ನೆಯ ಸಂಜೆ ಕಳಕಳಿಸುತ್ತಿದ್ದ ಊರು ಮಾಯವಾಗಿ ಅದು ಇದ್ದೆಡೆ ಒಂದು ಸರೋವರವಿದೆ.

ಮುದುಕರು ಅವರ ಕಾಲಿಗೆ ಬಿದ್ದರು. ಹೊಸಬರು "ಅಯ್ಯಾ! ನಿಮ್ಮ ಉಪಚಾರಕ್ಕೆ ಮೆಚ್ಚಿಕೊಂಡೆವು. ನಾವು ದೇವತೆಗಳು. ಮನುಷ್ಯರನ್ನು ಪರೀಕ್ಷಿಸಲು ಹೀಗೆ ಆಗಾಗ ತಿರುಗುತ್ತ ಇರುತ್ತೇವೆ. ನಿಮ್ಮ ಊರಿನವರು ಮನುಷ್ಯರಾಗಿರುವಷ್ಟು ಯೋಗ್ಯರಲ್ಲ. ಆದರಿಂದ ಅವರನ್ನೆಲ್ಲ ಮೀನು ಮಾಡಿದ್ದೇವೆ. ಅಲ್ಲಿ ಅವರೆಲ್ಲ ಒಬ್ಬರನ್ನು ಒಬ್ಬರು ತಿಂದು ಸಾಯುವರು. ನೀವಿಬ್ಬರೂ ಪುಣ್ಯವಂತರು. ಆದರಿಂದಲೇ ನಿಮಗೆ ಅಕ್ಷಯಪಾತ್ರೆಯನ್ನು ಕೊಟ್ಟಿದ್ದೇವೆ ನಿಮ್ಮ ಹಾಲಿನ ಪಾತ್ರೆಯಿಂದ ನೀವು ಎಷ್ಟು ಹಾಲು ಸುರಿದರೂ ಅದು ಬರಿದಾಗುವುದಿಲ್ಲ. ನಿಮಗೆ ದೇವರು ಬೇಕಾದ ಐಶ್ವರ್ಯವನ್ನು ಕೊಡುವನು. ನೀವು ಇಲ್ಲಿ ಮನೆ ಕಟ್ಟಿಕೊಂಡು ಸುಖವಾಗಿರಿ" ಎಂದು ಆಶೀರ್ವಾದ ಮಾಡಿದರು.

ಮತ್ತೆ ಅವರು ತಲೆಯೆತ್ತಿ ನೋಡುವಾಗ್ಗೆ ಅಲ್ಲಿ ಯಾರೂ ಇರಲಿಲ್ಲ.

---

# ಮುದುಕಿಯ ಮಕ್ಕಳು

ಒಂದೂರಿನಲ್ಲಿ ಒಬ್ಬ ಮುದುಕಿ. ಅವಳಿಗೆ ಇಬ್ಬರು ಮೊಮ್ಮಕ್ಕಳು. ಆ ಮಕ್ಕಳ ತಾಯಿ ಬಹಳ ಬಾಲ್ಯದಲ್ಲಿಯೇ ತೀರಿಹೋಗಿದ್ದಳು. ಆದರಿಂದ ಅವರು ಆ ಮುದುಕಿಯನ್ನೇ ಅಮ್ಮ ಅಮ್ಮ ಎನ್ನುತ್ತಿದ್ದರು. ಮಿಕ್ಕವರೂ ಅವರನ್ನು ಮುದುಕಿಯ ಮೊಮ್ಮಕ್ಕಳು ಎನ್ನದೆ ಮುದುಕಿಯ ಮಕ್ಕಳು ಮುದುಕಿಯ ಮಕ್ಕಳು ಎನ್ನುತ್ತಿದ್ದರು.

ಮುದುಕಿಗೆ ಆ ಮಕ್ಕಳಲ್ಲಿ ಕಿರಿಯವಳನ್ನು ಕಂಡರೆ ಬಹಳ ವಿಶ್ವಾಸ; ಅವಳು ಶುದ್ಧ ಕುರೂಪಿ. ಸಾಲದುದಕ್ಕೆ ಸೋಮಾರಿ. ಬೆಳಗಿನಿಂದ ಸಂಜೆ ಯವರೆಗೂ ಮೈಮುರಿದುಕೊಂಡು ಆಕಳಿಸುತ್ತಾ ತಿರುಗಿಕೊಂಡಿರುವುದೇ ಕೆಲಸ. ಆದರೂ ಅವಳನ್ನು ಕಂಡರೆ ಮುದುಕಿಗೆ ಅಕ್ಕರೆ. ಇನ್ನೊಬ್ಬಳು ಬೆಳಗಿನಿಂದ ಸಂಜೆಯವರೆಗೂ ಮೈಮುರಿದು ದುಡಿಯುವಳು. ಅಡುಗೆ ಮುಸುರೆಯಿಂದ ಹಿಡಿದು ಬಟ್ಟೆ ಒಗೆಯುವವರೆಗೆ ಎಲ್ಲ ಕೆಲಸವನ್ನೂ ಅವಳೇ ಮಾಡುವಳು. ಆದರೂ ಅವಳನ್ನು ಕಂಡರೆ ಆ ಮುದುಕಿಗೆ ಆಗದು. ಏನೋ ಕೌಡಿಗೆ ತೆಗೆದುಕೊಂಡ ಗೌಡಿಯ ಹಾಗೆ ನೋಡುವಳು.

ಹೀಗೆ ಇರುತ್ತಿರುವಾಗ ಒಂದುದಿನ ಅವಳು ಚರಕ ತೆಗೆದುಕೊಂಡು ದಾರ ತೆಗೆಯುವುದಕ್ಕೆ ಕುಳಿತುಕೊಂಡಳು. ತನ್ನ ದುಃಖವನ್ನು ಕುರಿತು ಯೋಚಿಸುತ್ತಾ ಅದ್ದಜ್ಞಾನದಲ್ಲಿದ್ದಾಗ ಕದಿರು ಬೆರಳಿಗೆ ತಗಲಿತು; ರಕ್ತ ಸುರಿ ಯಿತು. ಅವಳು ಕದಿರು ತೊಳೆದುಕೊಂಡು ಬರೋಣವೆಂದು ಹಳ್ಳಕ್ಕೆ ಹೋದಳು. ಅಲ್ಲಿ ಕದಿರು ಕೈಯಿಂದ ಜಾರಿ ನೀರಿಗೆ ಬಿತ್ತು; ನೀರು ಕದಿರನ್ನು ಕೊಚ್ಚಿಕೊಂಡು ಹೋಯಿತು. ಹುಡುಗಿಯು ಅಳುತ್ತಾ ಕುಳಿತುಕೊಂಡಳು. ಮನೆಗೆ ಹೋದರೆ, ತನಗೆ ಏಟು ತಪ್ಪುವುದಿಲ್ಲವೆಂದು ದಿಗಿಲುಪಟ್ಟು ಆ ಹಳ್ಳದ ದಡದಲ್ಲಿಯೇ ಹುಡುಕಿಕೊಂಡು ಹೋದಳು.

ಆ ನೀರು ಒಂದಷ್ಟು ದೂರ ಹೋಗಿ ಅಲ್ಲಿ ಒಂದು ಕಮರಿಯೊಳಕ್ಕೆ ಬೀಳುತ್ತಿತ್ತು. ಆ ಕಮರಿಗೆ ಇಳಿದಾದರೂ ಆ ಕದಿರು ತರೋಣವೆಂದು, ಆ ಹುಡುಗಿಯು, ಪಾಪ! ತಾನು ಬೀಳುವುದನ್ನೂ ಕಾಣದೆ ಕೆಳಕ್ಕಿಳಿದು ಹೋದಳು. ಹೋಗುತ್ತಿದ್ದರೆ, ನೀರು ಹೋಗುವ ಒಂದು ಗುಹೆಯು ಕಾಣಿಸಿತು. ಅದರಲ್ಲಿ ಅವಳು ಧೈರ್ಯಮಾಡಿ ಹೋದಳು.

ಆ ಗುಹೆಯಲ್ಲಿ ಅಷ್ಟುದೂರ ಹೋಗುವವರೆಗೂ ಗಾಡಾಂಧಕಾರವಾಗಿತ್ತು. ಅಷ್ಟುದೂರ ಹೋದಮೇಲೆ ಬೆಳಕು ಕಾಣಿಸಿತು. ಹುಡುಗಿಯು ಧೈರ್ಯಗೊಂಡು ಮುಂದೆ ಹೋಗಲು ಅಲ್ಲಿ ಮನೆಗಳು ಕಾಣಿಸಿದುವು. ಹುಡುಗಿಯು ಬಹು ಆಶ್ಚರ್ಯಪಟ್ಟುಕೊಂಡು ಮುಂದುವರಿದಳು.

ಅಲ್ಲಿ ಒಂದುಕಡೆ ಒಲೆ. ಅದರಲ್ಲಿ ರೊಟ್ಟಿಗಳನ್ನು ಯಾರೋ ಬೇಯುವುದಕ್ಕಿಟ್ಟಿದ್ದರು. ಅವೆಲ್ಲ ಬೆಂದು ನಿಂತಿದ್ದುವು. ಇನ್ನಷ್ಟು ಹೊತ್ತಾದರೆ ಅವೆಲ್ಲ ಸೀದುಹೋಗುತ್ತಿದ್ದುವು. ಅಲ್ಲಿ "ನಾವೆಲ್ಲ ಬೆಂದು ನಿಂತಿದ್ದೇವೆ. ಮೊದಲು ತೆಗೆ, ಮೊದಲು ತೆಗೆ, ಇಲ್ಲವಾದರೆ ಸೀದುಹೋಗುವೆವು" ಎಂದು ಯಾರೋ ಹೇಳಿದ ಹಾಗೆ ಕೇಳಿಸಿತು.

ಇವಳು ತಟ್ಟನೆ ಹೋಗಿ ಅವುಗಳನ್ನೆಲ್ಲ ತೆಗೆದು ಹೇಗೆ ಹೇಗೆ ಇಡಬೇಕೋ ಇಟ್ಟು ಮುಂದೆ ಹೋದಳು. ಅಲ್ಲೊಂದು ಸೇಬಿನ ಮರ. ಅದರಲ್ಲಿ ಎಲ್ಲವೂ ಹಣ್ಣಾಗಿದ್ದುವು. ಅಲ್ಲಿ ಯಾರೋ "ಹುಡುಗಿ! ಹುಡುಗಿ! ಈ ಮರ ಒಂದುಸಲ ಅಲ್ಲಾಡಿಸು. ಈ ಹಣ್ಣುಗಳೆಲ್ಲ ಕೆಳಗೆ ಬೀಳಲಿ" ಎಂದ ಹಾಗಾಯಿತು. ಇವಳು "ಇದೇನಾಶ್ಚರ್ಯ! ಯಾರೂ ಇಲ್ಲದ ಕಡೆಯಲ್ಲಿ ಈ ಮಾತನಾಡಿದವರು ಯಾರು?" ಎಂದುಕೊಂಡು ಆ ಮರವನ್ನೊಮ್ಮೆ ಹಿಡಿದು ಅಲ್ಲಾಡಿಸಿದಳು. ಹಣ್ಣುಗಳೆಲ್ಲ ಕೆಳಗೆ ಬಿದ್ದುವು.

ಅಲ್ಲಿಂದ ಮುಂದೆ ಹೋಗುತ್ತಿರಲು ಒಂದು ಕಿಟಕಿಯ ಬಾಗಿಲು ತೆರೆದು ಯಾರೋ ಕೂಗಿದರು; ಹುಡುಗಿಯು ತಲೆಯೆತ್ತಿ ನೋಡಲು ಅಲ್ಲಿ ಒಬ್ಬಳು ಮುದುಕಿ. ಬಾಚಿಯುಷ್ಟಗಲದ ಅವಳ ಹಲ್ಲುಗಳನ್ನು ಕಂಡು

ಹುಡುಗಿಗೆ ದಿಗಿಲಾಯಿತು. ಅವಳು ಮಾತ್ರ ನಗುನಗುತ್ತ ಮಾತನಾಡಿಸಿ "ಏನೇ ತಾಯಿ! ನಮ್ಮ ಮನೆಯಲ್ಲಿ ಇರುತ್ತೀಯಾ? ಅಷ್ಟು ಕಸಮುಸರೆ ಮಾಡಿಕೊಡು. ಹಾಸಿಗೆ ಒದರಿ ಹಾಸಿಕೊಡು. ನಿನ್ನನ್ನು ಅರಗಿಣಿಯ ಹಾಗೆ ಕಾಪಾಡುತ್ತೇನೆ. ಆದರೆ ಎಚ್ಚರಿಕೆ. ನೀನು ಹಾಸಿಗೆ ಒದರಿದರೆ, ಅದರಲ್ಲಿ ಹಾಕಿರುವ ಸಣ್ಣ ಗರಿಗಳೆಲ್ಲ ಹಾರಾಡಬೇಕು. ಹಾಗೆ ಒದರಬೇಕು. ನಾನೇ ಚಳಿಯಮ್ಮ. ನೀನು ನನ್ನ ಹಾಸಿಗೆಯನ್ನು ಗರಿಗಳು ಹಾರುವಂತೆ ಒದರಿದರೆ ಭೂಲೋಕದಲ್ಲೆಲ್ಲ ಮಂಜು ಸುರಿಯುವುದು" ಎಂದಳು.

ಹುಡುಗಿಯು ಆಗಲೆಂದು ಒಪ್ಪಿಕೊಂಡಳು. ಮುದುಕಿಗೆ ಅನ್ನ ನೀರು ಕಾಣಿಸುವುದರ ಜೊತೆಗೆ ನಿತ್ಯವೂ ಅವಳ ಹಾಸಿಗೆಯನ್ನು ಒದರುವಳು. ಅದರಲ್ಲಿದ್ದ ಸಣ್ಣ ಗರಿಗಳೆಲ್ಲ ಹಾರಾಡುವ ಮಟ್ಟಿಗೆ ಒದರುವಳು. ಹೀಗೆ ಮಾಡಿಕೊಂಡಿರಲು ಅವಳು ಎಷ್ಟೇ ಕಷ್ಟವಾಗಲಿ ಗಮನಿಸದೆ ದುಡಿಯುವುದನ್ನು ಕಂಡು ಮುದುಕಿಯ ಮನ ಮೆಚ್ಚಿತು.

ಇತ್ತಕಡೆ ಹುಡುಗಿಯ ಮನಸ್ಸು ಮನೆಯ ಕಡೆ ತಿರುಗಿತು. ಹೊಡೆದು ಬಡಿದು ಮಾಡಿದರೂ ಚಿಂತೆಯಿಲ್ಲ. ಆ ಅಜ್ಜಿಯನ್ನೂ ತಂಗಿಯನ್ನೂ ನೋಡಬೇಕು ಎನ್ನಿಸಿತು. ಆ ಆಸೆಯು ತಾನೇ ತಾನಾಗಿ ಅವಳು ಮೊಂಕು ಹಿಡಿಯುವ ಮಟ್ಟಿಗೂ ಆಯ್ತು. ಕೊನೆಗೆ ಮುದುಕಿಯನ್ನು 'ನಾನು ಮನೆಗೆ ಹೋಗಬೇಕು. ಕಳುಹಿಸಿಕೊಡು' ಎಂದು ಕೇಳಿಕೊಂಡಳು. ಅದನ್ನು ಕೇಳಿ ಮುದುಕಿಯು ಬಹಳ ಸಂತೋಷಪಟ್ಟುಕೊಂಡು, "ಆಗಲಮ್ಮಾ! ನೀನು ಮನೆಗೆ ಹೋಗಬೇಕು ಎನ್ನುವುದೂ ನ್ಯಾಯವಾದುದೇ! ನೀನು ಬಂದು ಬಹಳ ದಿನವಾಯಿತು. ಬಾಳಿ ಬದುಕುವ ಹೆಣ್ಣುಮಗಳನ್ನು ನಾನು ಎಷ್ಟು ದಿನ ಇರಿಸಿಕೊಂಡಿರುವುದು. ನಾನೇ ಕಳುಹಿಸಿಕೊಡಬೇಕೆಂದು ಇದ್ದೆ. ಬಾ, ನಾನೇ ಕರೆದುಕೊಂಡು ಹೋಗಿ ಬಿಟ್ಟು ಬರುತ್ತೇನೆ" ಎಂದು ಕರೆದುಕೊಂಡು ಹೊರಟಳು.

"ನೀನು ಬಹು ಕಷ್ಟಪಟ್ಟು ಕೆಲಸ ಮಾಡುತ್ತಿದ್ದೆ. ಒಳ್ಳೆಯ ಜಾಣೆ.

ಮಕ್ಕಳೆಲ್ಲ ನಿನ್ನ ಹಾಗೆ ಇರಬೇಕು" ಎಂದು ಒಳ್ಳೆಯ ಮಾತುಗಳನ್ನು ಆಡುತ್ತ ಮುದುಕಿಯು ತನ್ನ ಲೋಕದ ಬಾಗಿಲವರೆಗೂ ಬಂದಳು. ಅಲ್ಲಿ ತಾನು ನಿಂತುಕೊಂಡು "ಹೋಗಿ ಬರುತ್ತೀಯಾ ತಾಯಿ? ಹೋಗಿ ಬಾರಮ್ಮ ನಿನಗೆ ಒಳ್ಳೆಯದಾಗಲಿ!" ಎಂದು ಹರಿಸಿದಳು.

ಹುಡುಗಿಯು ಮುದುಕಿಯನ್ನು ಬೀಳ್ಕೊಂಡು ಬಾಗಿಲಿಂದ ಹೊರಕ್ಕೆ ಬರುತ್ತಿದ್ದ ಹಾಗೆಯೇ ಚಿನ್ನದ ಮಳೆ ಕರೆಯಿತು. ಅವಳ ಮೈಮೇಲೆ ಬಿದ್ದ ಚಿನ್ನದ ಉಂಡೆಗಳೆಲ್ಲ ಹಾಗೆ ಹಾಗೇ ಅವಳಿಗೇ ಅಂಟಿಕೊಂಡುವು. "ಅದಷ್ಟೂ ನೀನೇ ತೆಗೆದುಕೋ! ನೀನು ನನ್ನ ಹಾಸಿಗೆ ಬಲು ಚೆನ್ನಾಗಿ ಒದರುತ್ತಿದ್ದೆ. ಭೂಮಿಯಲ್ಲೆಲ್ಲ ಬಲು ಚೆನ್ನಾಗಿ ಮಂಜು ಸುರಿಯಿತು" ಎಂದು ನಗುತ್ತ ಹೇಳಿ ಬಾಗಿಲು ಮುಚ್ಚಿದಳು.

ಹುಡುಗಿಯು ತನ್ನಮೇಲೆ ಕರೆದ ಚಿನ್ನವನ್ನೆಲ್ಲ ಹಾಗೆಯೇ ತೆಗೆದುಕೊಂಡು ಮನೆಗೆ ಬಂದಳು. ಅಲ್ಲಿ ಮನೆಯ ಮೇಲೆ ಕುಳಿತಿದ್ದ ಹುಂಜನು, "ಅಕೋ ಬಂದಳಕ್ಕ ಅಕ್ಕ ಬಂದಳೂ. ಚಿನ್ನ ಮೆತ್ತಿಕೊಂಡು ನಗುತ ನಮ್ಮ ಅಕ್ಕ ಬಂದಳೂ" ಎಂದು ಹಾಡಿತು. ಆ ಹಾಡನ್ನು ಕೇಳಿ, ಮುದುಕಿಯೂ ತಂಗಿಯೂ ಈಚೆಗೆ ಬಂದು ಚಿನ್ನದಂಥಾ ನಗು ನಗುತ್ತ, ಚಿನ್ನವನ್ನು ಮೈಗೆಲ್ಲ ಮೆತ್ತಿಕೊಂಡು ಬಂದ ಇವಳನ್ನು ಕಂಡರು. ಅವಳು ಬೇಡವಾಗಿದ್ದರೂ ಅವಳ ಚಿನ್ನದಿಂದ ಅವಳೂ ಬೇಕಾಗಿ, ಅವಳಿಗೆ ಬೇಕಾದಷ್ಟು ಉಪಚಾರಮಾಡಿ, ನಡೆದುದೆಲ್ಲವನ್ನೂ ವಿಚಾರಿಸಿದರು.

ಮುದುಕಿಯು ಕಿವಿಯವರೆಗೂ ಬಾಯಿ ತೆರೆದುಕೊಂಡು, ಮೈಯೆಲ್ಲ ಕಿವಿಯಾಗಿ ಕೇಳಿದಳು. "ಹಾಗೆ ಗುಹೆಯಲ್ಲಿದ್ದ ಮುದುಕಿ ಇವಳಿಗಿಷ್ಟು ಚಿನ್ನವನ್ನು ಕೊಟ್ಟಳು" ಎನುತ್ತಲೂ, "ಇನ್ನೊಬ್ಬ ಮೊಮ್ಮಗಳನ್ನು ಕಳುಹಿಸಬೇಕು. ನನಗೆ ಬೇಡದವಳಿಗೇ ಇಷ್ಟು ಕೊಟ್ಟ ಮುದುಕಿ ನನಗೆ ಬೇಕಾದವಳಿಗೆ ಇನ್ನೆಷ್ಟು ಕೊಟ್ಟಾಳು" ಎಂದುಕೊಂಡು ಅವಳನ್ನು "ಹೋಗು ಹೋಗು" ಎಂದು ಕಳುಹಿಸಿದಳು.

ಅಚ್ಚುಮೆಚ್ಚಿನ ಮೊಮ್ಮಗಳು ಹತ್ತಿಸೂಲುವುದಕ್ಕೆ ಕುಳಿತಳು. ಅವಳಿಗೆ ಅದು ಒಳಗೆ ಎಳ್ಳಷ್ಟೂ ಬೇಕಿಲ್ಲ. ಆದರೂ ಅಜ್ಜಿಯ ಬಲವಂತಕ್ಕೆ ಒಂದೆರಡು ಸಲ ರಾಟೆ ತಿರುಗಿಸಿ, ತಾನೇ ಕದರು ಚುಚ್ಚಿಕೊಂಡು ರಕ್ತ ಬರಿಸಿಕೊಂಡಳು. ಕದರನ್ನು ತೊಳೆಯುವುದಕ್ಕೆಂದು ಹಳ್ಳಕ್ಕೆ ಹೋದಳು. ನೀರು ಭರ್‍ರನೆ ಓಡುತ್ತಿರುವ ಎಡೆನೋಡಿ ಅಲ್ಲಿ ಕದರನ್ನು ಎಸೆದಳು. ಅವಳ ಅದೃಷ್ಟಕ್ಕೆ ಆ ನೀರು ಕದರನ್ನು ಹೊತ್ತುಕೊಂಡೇ ಹೋಗಲಿಲ್ಲ. "ಆದರೇನು?" ಎಂದು ತಾನೇ ಅದನ್ನು ಮುಂದಕ್ಕೆ ನೂಕುತ್ತ ಕಮರಿಯವರೆಗೂ ಹೋದಳು.

ಅಲ್ಲಿ ತನ್ನನ್ನು ಕಳುಹಿಸಿದ ಅಜ್ಜಿಯನ್ನು ಬಾಯಿ ಹಿಡಿಸಲಾರದಂತೆ ಬಯ್ದುಕೊಳ್ಳುತ್ತ ಇಳಿದಳು. ಅವಳಿಗೂ ಆ ಗುಹೆಯು ಕಾಣಿಸಿತು. ಒಳಕ್ಕೆ ಹೋದಳು. ಅವಳಿಗೆ ಆ ಗುಹೆಯಲ್ಲಿ ಏನಿದೆ ಎಂಬುದು ಗೊತ್ತಿತ್ತಾಗಿ ದಿಗಿಲೂ ಆಗಲಿಲ್ಲ ಏನೂ ಇಲ್ಲ. ಇವಳೂ ಆ ಮನೆಗಳನ್ನು ಕಂಡು ಹೋದಳು. ಅಲ್ಲಿ ಒಂದು ಕಡೆ ಅವಳಿಗೆ ಆದಂತೆ ಇವಳಿಗೂ "ನಾವೆಲ್ಲ ಬೆಂದು ನಿಂತಿದ್ದೇವೆ. ಮೊದಲು ಈಚೆಗೆ ತೆಗೆ. ಇಲ್ಲದಿದ್ದರೆ ನಾವು ಸುಟ್ಟು ಹೋಗುತ್ತೇವೆ" ಎಂದು ಕೇಳಿಸಿತು. ಹಿಂತಿರುಗಿ ನೋಡಿ, "ಅಲ್ಲವೇ ಮತ್ತೆ? ನಾನು ಅದಕ್ಕೇ ಬಂದುದು! ನನ್ನ ಕೈಯೆಲ್ಲ ಮಸಿಯಾಗುತ್ತೆ. ಹೂ" ಎಂದು ಮುಂದೆ ನಡೆದಳು. ಮುಂದೆ ಸೇಬಿನ ಮರವೂ ಕಾಣಿಸಿತು. ಹತ್ತಿರ ಹೋದಾಗ ಅದರ ಬಳಿಯೂ "ನಾವೆಲ್ಲ ಹಣ್ಣಾಗಿದ್ದೇವೆ ಉದುರಿಸು ಉದುರಿಸು" ಎಂದವು. ಇವಳು, "ಹೂಂ ಆಗಲಿ. ನನ್ನ ತಲೆಯ ಮೇಲೆ ಬಿದ್ದರೆ!' ಎಂದು ಅತ್ತಕಡೆ ಹೋದಳು.

ಕೊನೆಗೆ ಮುದುಕಿಯೂ ಸಿಕ್ಕಿದಳು. "ಏನೇ ಹುಡುಗಿ! ನಮ್ಮ ಮನೆಯಲ್ಲಿ ಇರುತ್ತೀಯಾ? ಹೇಳಿದ ಕೆಲಸ ಮಾಡಿಕೊಂಡಿರು. ಹಾಸಿಗೆ ಚೆನ್ನಾಗಿ ಒದರಿ ಗರಿಗಳೆಲ್ಲ ಹಾರುವ ಹಾಗೆ ದಿನಾ ಒದರಬೇಕು. ಮಾಡುತ್ತೀಯಾ?" ಎಂದಳು. ಇವಳು ಅಕ್ಕನು ಹೇಳಿದುದನ್ನೆಲ್ಲ ನೆನಸಿಕೊಂಡು ಎಷ್ಟೋ ಸಂತೋಷದಿಂದ ಒಪ್ಪಿಕೊಂಡಳು.

ಆದರೇನು? ಅವಳು ಅಡಿಗೆ ಮಾಡು ಎಂದರೆ ರೊಟ್ಟಿ ಸೀಸುವಳು. ಚಟ್ನಿಯನ್ನು ಒರಳಿಗೆ ಹಾಕಿದ ಶಾಸ್ತ್ರಮಾಡಿ ತೆಗೆದಿಡುವಳು. ಹೀಗೆ ಸೀಕಲು ರೊಟ್ಟಿ, ಮೆದುಗದ ಚಟ್ನಿ ತಿಂದು ಮುದುಕಿಗೆ ಬೇಸರವಾಯಿತು. ಮೊದಲು ಎರಡು ದಿನ ಹೊತ್ತಿಗೆ ಸರಿಯಾಗಿ ಎದ್ದು ಹಾಸಿಗೆಯನ್ನು ಚೆನ್ನಾಗಿ ಒದರಿದಳು. ಮೂರನೇ ದಿನವೇ ಮೊದಲಾಯ್ತು ಸೋಮಾರಿಯ ರೋಗ. ಹೊತ್ತಿಗೆ ಸರಿಯಾಗಿ ಏಳಲಿಲ್ಲ. ಮುದುಕಿಯು ಎದ್ದು ಬಂದು ಎಬ್ಬಿಸಿದ ಮೇಲೆ ತಾನು ಗೊಣಗುಟ್ಟಿಕೊಂಡು ಏಳುವಳು. ಆಗ ಎದ್ದು ಹಾಸಿಗೆ ಒದರಿದ ಶಾಸ್ತ್ರಮಾಡುವಳು. ಹೀಗಾಗಿ, ಆ ಮುದುಕಿಗೆ ಹುಡುಗಿಯನ್ನು ಕಂಡರೆ ಅಸಂಯ್ಯವಾಯ್ತು.

"ನೀನು ಹೋಗಿ ಬಾ. ನನಗೆ ನಿನ್ನಿಂದ ಮಾನ ಹೋಗುತ್ತದೆ" ಎಂದ ಹೇಳಿ ಕಳುಹಿಸಿಕೊಟ್ಟಳು. ಈ ಹುಡುಗಿಯು "ಇನ್ನೇನು ತಾನೇ ಹೋಗಿ ಬಾ ಎಂದಳು. ಇನ್ನು ನನಗೂ ಮೈತುಂಬ ಚಿನ್ನ ಹೊರಿಸುತ್ತಾಳೆ" ಎಂದು ಆಸೆ ಪಟ್ಟುಕೊಂಡು ಹೊರಟಳು. ಮುದುಕಿಯು ಒಂದು ಮಾತೂ ಆಡದೆ, ಊರಬಾಗಿಲವರೆಗೂ ಕರೆತಂದು "ಹೋಗಿ ಬಾ" ಎಂದಳು. ಹುಡುಗಿಯು ಆ ಬಾಗಿಲಿಂದ ಈಚೆಗೆ ಬರುತ್ತಲೂ ಒಂದು ಬಿಂದಿಗೆಯಷ್ಟು ಕಲ್ಲೆಣ್ಣೆಯು ಅವಳ ತಲೆಯ ಮೇಲೆ ಸುರಿಯಿತು. ಮುದುಕಿಯು "ನೀನು ಮಾಡಿದ ಕೆಲಸಕ್ಕೆ ಇದೇ ಮರ್ಯಾದೆ" ಎಂದು ಬಾಗಿಲನ್ನು ತಟಾರನೆ ಮುಚ್ಚಿಕೊಂಡು ಹೋದಳು.

ಹುಡುಗಿಯು ಅಮಾವಾಸ್ಯೆ ಕಪ್ಪಿನಂತಹ ಕಲ್ಲೆಣ್ಣೆಯನ್ನು ಹುಯಿಸಿಕೊಂಡು ಮನೆಗೆ ಬಂದಳು. ಮನೆಯ ಮೇಲಿದ್ದ ಹುಂಜನು,

"ಅಕೋ ಬಂದಳಕ್ಕ ಬಂದಳು.
ಕಲ್ಲೆಣ್ಣೆ ಸುರಿಸಿಕೊಂಡು
ಕರಿಯ ಅಕ್ಕ ಬಂದಳೂ"

ಎಂದು ಹಾಡಿತು. ಅದನ್ನು ಕೇಳಿ, ಮುದುಕಿಯು ಗಾಬರಿಯಾಗಿ ಈಚೆಗೆ

ಓಡಿಬಂದಳು. ಮೆಚ್ಚಿನ ಮೊಮ್ಮಗಳು ಕಲ್ಲಿನ್ಣ್ಣೆ ಸ್ನಾನಮಾಡಿಕೊಂಡು ಚಂದನದ ಗೊಂಬೆಯಾಗಿ ಎದುರಿಗೆ ನಿಂತಿದ್ದಳು. ಮುದುಕಿಗೆ ಹೊಟ್ಟೆಗೆ ಹಾಲು ಹುಯ್ದುಕೊಂಡಂತಾಯಿತು. ಆ ಕಲ್ಲಿನ್ಣ್ಣೆ ಸಾಲದುದಕ್ಕೆ ಏನು ಮಾಡಿದರೂ ಹೋಗಲೇ ಇಲ್ಲವಂತೆ! ಅವಳು ಸಾಯುವವರೆಗೂ ಹಾಗೆಯೇ ಇದ್ದಿತಂತೆ.

## ಮನಸ್ಸಿದ್ದರೆ ಮಹಾದೇವ!

ಒಂದು ಊರಿನಲ್ಲಿ ಒಬ್ಬ ಜ್ಯಾಂಡಿನವನಿದ್ದನು. ಅವನು ಒಳ್ಳೆ ಚೆಲುವ, ಇನ್ನೂ ಪ್ರಾಯದವನು. ಅವನು ಒಂದು ದಿನ ಹಾಗೆಯೇ ತಿರುಗಾಡಿಕೊಂಡು ಬರಲು ಹೋಗಿದ್ದಾಗ ಅಲ್ಲಿ ಮೂರು ತುಂಡು ಮಸ್ಲಿನ್ ಬಿದ್ದಿತ್ತು. ನೋಡಿ "ಬಹಳ ಚೆನ್ನಾಗಿದೆ ಈ ಮಸ್ಲಿನ್" ಎಂದುಕೊಂಡು ಅದನ್ನು ತೆಗೆದು ಜೋಬಿನಲ್ಲಿಟ್ಟುಕೊಂಡನು. ಹಾಗೇ ತಿರುಗಾಡಿಕೊಂಡು ಬರುವಾಗ ಆ ಮಸ್ಲಿನ್ ವಿಷಯ ಮರೆತೇ ಹೋಯಿತು.

ಅವನು ಮಲಗಿದ್ದಾಗ ಯಾರೋ ಒಂದು ಸುಳಿದ ಹಾಗಾಯಿತು. ಸಣ್ಣಗೆ ಸದ್ದೂ ಕೇಳಿಸಿತು: "ಅಯ್ಯೋ! ಅಯ್ಯೋ! ಏಳು! ಏಳು!" ಎಂದಿತು ಒಂದು ಸಣ್ಣ ದನಿ.

ಅವನಿಗೆ ಎಚ್ಚರವಾಯಿತು, "ಯಾರು ಅದು?" ಎಂದನು.

ಆ ದನಿಯೇ ಹೇಳಿತು: "ಸಂಜೆಯಲ್ಲಿ ನೀನು ತೆಗೆದುಕೊಂಡ ಮಸ್ಲಿನ್ ನನ್ನದು, ದಯವಿಟ್ಟು ಕೊಡು."

"ಅಗತ್ಯವಾಗಿ ಆಗಬಹುದು, ಆದರೆ, ನೀನು ಯಾರು ಎಂಬುದನ್ನು ದಯವಿಟ್ಟು ಹೇಳಬೇಕು."

"ಆ! ನಾನೊಬ್ಬ ದೊರೆಯ ಮಗಳು. ನನ್ನನ್ನು ಒಬ್ಬಳು ಮಂತ್ರ ಸಾನಿಯು ಹಿಡಿದು ಸೆರೆಹಾಕಿದ್ದಾಳೆ. ನಾನಿರುವುದು ಗಾಜಿನ ಬೆಟ್ಟದ

ಮೇಲೆ! ನಾನು ನಿತ್ಯವೂ ಈ ಕೊಳಕ್ಕೆ ಬಂದು ನನ್ನ ಸೋದರಿಯರೊಡನೆ ಮಿಾಯಬೇಕು. ಅವರು ಹೊರಟು ಹೋಗಿ ಎಷ್ಟೋ ಹೊತ್ತಾಯಿತು. ಬಟ್ಟೆಯಿಲ್ಲದೆ ನಾನು ಹೋಗಲಾರೆ, ಅದರಿಂದ ದಯವಿಟ್ಟು ಕೊಡು."

"ದಿಗಿಲುಪಡಬೇಡ, ನಿನ್ನ ಬಟ್ಟೆ ಭದ್ರವಾಗಿದೆ" ಎಂದು ಹೇಳಿ ಜೋಬಿನಲ್ಲಿದ್ದ ಮಸ್ಲಿನ್ ತೆಗೆದು ಕೊಟ್ಟನು. ಅವನ ಕೈಯಲ್ಲಿದ್ದ ಮಸ್ಲಿನ್ ಮಾಯವಾಯಿತು. ಆದರೂ ಯಾರೂ ಕಾಣಿಸಲಿಲ್ಲ. ಆಗ ಅವನು ಮತ್ತೆ "ಕೊಂಚ ನಿಲ್ಲು, ನನ್ನಿಂದ ನಿನಗೇನಾದರೂ ಉಪಕಾರವಾದೀತೆ?" ಎಂದು ಕೇಳಿದನು.

"ನೀನು ಗಾಜಿನ ಬೆಟ್ಟಕ್ಕೆ ಬಂದರೆ ಆಗಬಹುದು, ಆದರೆ ಅದು ಹೇಗೆ ಸಾಧ್ಯ? ನೀನು ಅಲ್ಲಿಗೆ ಬಂದರೂ ಅದನ್ನು ಹತ್ತುವುದಕ್ಕೇ ಆಗುವುದಿಲ್ಲ."

"ಅದೆಲ್ಲ ಪರವಾಯಿಲ್ಲ, ಮನಸ್ಸಿದ್ದರೆ ಮಹದೇವ! ಆದರೆ ಗಾಜಿನ ಬೆಟ್ಟವೆಲ್ಲಿದೆಯೋ ಅದೇ ತಿಳಿಯದಲ್ಲಾ!"

"ಅದು ಇರುವುದು ಕಾಡಿನ ನಡುವೆ. ಆ ಕಾಡಿನಲ್ಲಿ ನರಭಕ್ಷಕರಿದ್ದಾರೆ. ಇನ್ನೇನೂ ನಾನು ಹೇಳುವ ಹಾಗಿಲ್ಲ" ಎಂದು ಹೇಳಿ ಆ ಕನ್ನೆಯು ಹೊರಟು ಹೋಯಿತು. ರೆಕ್ಕೆಯ ಸದ್ದು ಕೇಳಿಸಿತು. ಮರುದಿನ ಬೆಳಿಗ್ಗೆ ಬ್ಯಾಂಡಿನವನು ತನ್ನ ಬ್ಯಾಂಡು ತೆಗೆದುಕೊಂಡು ಹೊರಟನು. ನರಭಕ್ಷಕರಿರುವ ಕಾಡೆಲ್ಲಿದೆ ಎಂದು ವಿಚಾರಿಸಿಕೊಂಡು ಹೋದನು. ಅಲ್ಲಿ ಎಲ್ಲೆಲ್ಲಿ ನೋಡಿದರೂ ನರಭಕ್ಷಕರು ಯಾರೂ ಕಣ್ಣಿಗೆ ಬೀಳಲಿಲ್ಲ. ಆಗ, ಕೊನೆಗೆ ತನ್ನ ಬ್ಯಾಂಡನ್ನು ಬಲವಾಗಿ ಹೊಡೆದನು.

ಆಗ ಒಂದು ಘೋರಾಕೃತಿಯು ತೆಂಗಿನ ಮರದುದ್ದವಾಗಿ ಬಂದು ಎದುರಿಗೆ ನಿಂತುಕೊಂಡು "ಪ್ರಾರಬ್ಧವೇ! ಇಲ್ಲಿಗೇಕೆ ಬಂದೆ? ನನ್ನ ನಿದ್ದೆ ಕೆಡಿಸಿದೆ. ನಿನ್ನನ್ನು ಸೊಳ್ಳೆ ಬಡಿಯುವ ಹಾಗೆ ಬಡಿದುಹಾಕಿಬಿಡುತ್ತೇನೆ" ಎಂದು ಅಬ್ಬರಿಸಿತು.

ಬ್ಯಾಂಡಿನವನ ಬಡಾಯಿ ಕೇಳಬೇಕೆ? "ಅಬ್ಬಬ್ಬಾ! ಅಯ್ಯನಿಗೆ

ಗೊತ್ತೇ ಇಲ್ಲವೇನೋ? ಹಿಂದೆ ಒಂದು ಸಾವಿರ ಜನರು ಬರುತ್ತಿದ್ದಾರೆ. ನಿಮ್ಮ ಕುಲವನ್ನೇ ನೆಲಮಟ್ಟ ಮಾಡುತ್ತಾರೆ" ಎಂದನು.

"ಅಂಗೈಯಿಂದ ಅಪ್ಪಳಿಸಿದರೆ ನೂರು ಜನರು ಒಟ್ಟಿಗೇ ಪ್ರಾಣ ಬಿಡುತ್ತಾರೆ. ಇವರು ನಮ್ಮನ್ನು ಮಟ್ಟಹಾಕುವರಂತೆ!" ಎಂದು ಆ ರಾಕ್ಷಸನು ಇನ್ನೊಮ್ಮೆ ಅಬ್ಬರಿಸಿದನು.

"ಹುಚ್ಚ! ನಿಮ್ಮ ಎದುರಿಗೆ ನಿಂತು ಯಾರು ಹೋರಾಡುತ್ತಾರೆ? ನೀವೆಲ್ಲ ಮಲಗಿಕೊಳ್ಳುವವರೆಗೂ ಸುಮ್ಮನಿದ್ದು, ನಿಮಗೆ ನಿದ್ದೆ ಬರುತ್ತಲೂ ಮೇಲೆ ಬೀಳುತ್ತಾರೆ. ಉಕ್ಕಿನ ಕೊಡತಿ ತಂದಿದ್ದಾರೆ. ನಿಮಗೆ ಎಚ್ಚರ ವಾಗಿ ನೀವು ಕಣ್ಣುಬಿಡುವುದರೊಳಗಾಗಿ ನಿಮ್ಮ ತಲೆಗಳೆಲ್ಲ ಪುಡಿಪುಡಿ ಯಾಗಿರುತ್ತವೆ."

ರಾಕ್ಷಸನಿಗೆ ಪೇಚಾಟಕ್ಕಿಟ್ಟುಕೊಂಡಿತು; "ನಿಜ! ಹುಲಿ ಕರಡಿ ಗಳನ್ನಾದರೆ ನೋಡಿಕೊಳ್ಳಬಹುದು. ಈ ಹಾಳು ಮನುಷ್ಯರೊಡನೆ ಹೆಣಗು ವುದು ಬಹಳ ಕಷ್ಟ" ಎನ್ನಿಸಿತು. ಕೊನೆಗೆ ಯೋಚನೆಮಾಡಿ "ಹೋಗಲಿ, ನೀವು ಹೊರಟುಹೋಗುವುದಕ್ಕೆ ಏನು ಮಾಡಬೇಕು ಹೇಳು. ಇನ್ನುಮೇಲೆ ನಾವು ಬಂದು ನಿಮ್ಮನ್ನು ಪೀಡಿಸುವುದಿಲ್ಲ, ನೀವೂ ನಮ್ಮನ್ನು ಪೀಡಿಸಬೇಡಿ, ನಿನ್ನದೂ ಏನಾದರೂ ಕೆಲಸವಿದ್ದರೆ ಹೇಳು. ಅದನ್ನೂ ಮಾಡಿಕೊಡುತ್ತೇನೆ, ತೊಲಗಿ ಹೋಗು" ಎಂದನು.

ಬ್ಯಾಂಡಿನವನು "ಹಾಗಾದರೆ ನನ್ನನ್ನು ಗಾಜಿನ ಬೆಟ್ಟಕ್ಕೆ ಕರೆದು ಕೊಂಡು ಹೋಗು" ಎಂದನು.

ರಾಕ್ಷಸನು ಅವನನ್ನು ಹೆಗಲಮೇಲೆ ಇಟ್ಟುಕೊಂಡು ಹೊರಟನು. ಬ್ಯಾಂಡಿನವನಿಗೆ ಆನಂದವಾಗಿ ಬ್ಯಾಂಡನ್ನು ಬಾರಿಸಿದನು. ರಾಕ್ಷಸನು ತನ್ನವರು ಹಿಂದಿರುಗಿ ಹೋಗಲೆಂದು ಬ್ಯಾಂಡು ಹೊಡೆಯುತ್ತಿದ್ದಾನೆ ಎಂದುಕೊಂಡನು.

ಆ ರಾಕ್ಷಸನು ಒಂದು ಝಾವ ನಡೆದು ಇನ್ನೊಬ್ಬ ರಾಕ್ಷಸನ

ಬಳಿಗೆ ಬಂದನು. ಅವನಿಗೆ ಏನೇನೋ ಹೇಳಿ, ಈ ಬ್ಯಾಂಡಿಸವನನ್ನು ಅವನಿಗೆ ಕೊಟ್ಟನು. ಅವನು ಅವನನ್ನು ತನ್ನ ಗುಂಡೀಗೆ ಸಿಕ್ಕಿಸಿಕೊಂಡು ಹೊರಟನು. ಅವನೂ ಒಂದು ಝಾವ ನಡೆದು ಹೋಗಿ ಮತ್ತೊಬ್ಬನಿಗೆ ಕೊಟ್ಟನು. ಅವನು ಇವನನ್ನು ತನ್ನ ಹ್ಯಾಟಿನ ಮೇಲೆ ಇಟ್ಟುಕೊಂಡು ಹೊರಟನು.

ಕೊಂಚ ಹೊತ್ತಿನೊಳಗಾಗಿ ಗಾಜಿನ ಬೆಟ್ಟವು ಕಾಣಿಸಿತು. ಅವನೂ ಒಂದು ಝಾವ ನಡೆದು ಮೂರು ಝಾವದ ಹೊತ್ತಿಗೆ ಗಾಜಿನ ಬೆಟ್ಟದ ಬಳಿಗೆ ಬಂದು ಇವನನ್ನು ಅಲ್ಲಿ ಇಳಿಸಿ ಅವನು ಕೂಗುತ್ತಿದ್ದರೂ ಹಿಂತಿರುಗಿ ನೋಡದೆ ಹೊರಟುಹೋದನು.

ಗಾಜಿನ ಬೆಟ್ಟವನ್ನು ಹತ್ತುವುದು ಹೇಗೆ? ಒಂದು ಹೆಜ್ಜೆ ಹತ್ತಿದರೆ ಎರಡು ಹೆಜ್ಜೆ ಜಾರುತ್ತದೆ. ಹೀಗಿರುವಾಗ ಹತ್ತುವುದು ಹೇಗೆ? "ಅಯ್ಯೋ! ಪಟ್ಟ ಶ್ರಮವೆಲ್ಲ ವ್ಯರ್ಥವಾಯಿತಲ್ಲಾ!" ಎಂದು ಚಿಂತಿಸುತ್ತಿರುವಾಗ ಅಲ್ಲಿಗೆ ಕೊಂಚ ದೂರದಲ್ಲಿ ಇಬ್ಬರು ಕಾದಾಡುತ್ತಿರುವುದು ಕಾಣಿಸಿತು. ಅಲ್ಲಿಗೆ ಹೋಗಿ ಅವರನ್ನು ಸಮಾಧಾನಮಾಡಬೇಕೆಂದು "ಅಯ್ಯಾ! ಯಾತಕ್ಕಯ್ಯಾ! ಒರಿಒರದೆ ಕಾದಾಡುತ್ತಿದ್ದೀರಲ್ಲ!" ಎಂದನು. ಅದಕ್ಕವರು "ನಾವು ಈ ಜೀನಿಗಾಗಿ ಹೊಡೆದಾಡುತ್ತಿದ್ದೇವೆ. ಯಾರು ಗೆದ್ದರೆ ಅವರಿಗೆ ಈ ಜೀನು!" ಎಂದರು. ಬ್ಯಾಂಡಿಸವನಿಗೆ ಅದನ್ನು ಕೇಳಿ ನಗು ಬಂತು. ದೊಡ್ಡದಾಗಿ ನಕ್ಕು "ಕುದುರೆಯೇ ಇಲ್ಲವಲ್ಲ. ಈ ಜೀನಿಗೆ ಯಾಕಯ್ಯಾ ಹೊಡೆದಾಟ?" ಎಂದು ಕೇಳಿದನು. ಅದಕ್ಕೆ ಅವರು "ಅಯ್ಯಾ! ಈ ಜೀನಿನ ಮಹತ್ತು ನೀನೇನು ಬಲ್ಲೆ? ಇದರಮೇಲೆ ಕುಳಿತುಕೊಂಡು ಎಲ್ಲಿಗೆ ಹೋಗಬೇಕು ಎಂದರೆ ಅಲ್ಲಿಗೆ ಹೋಗಬಹುದು" ಎಂದರು.

ಇದನ್ನು ಕೇಳಿ ಬ್ಯಾಂಡಿಸವನಿಗೆ ಕಿವಿ ನೆಟ್ಟಗಾಯಿತು "ಹಾಗಾದರೆ ಸರಿ!" ಎಂದು ಏನೂ ತಿಳಿಯದಿದ್ದವನ ಹಾಗೆ ಅವರ ಹೋರಾಟವನ್ನು ನೋಡುತ್ತ ಕುಳಿತನು. ಅವರು ಇನ್ನೆಲ್ಲವನ್ನೂ ಮರೆತು ಹೋರಾಡುತ್ತಿರುವಾಗ, ತಾನು ಸದ್ದುಮಾಡದೆ ಜೀನು ಹತ್ತಿ, ಬೆಟ್ಟದ ಮೇಲಕ್ಕೆ ನಡೆದನು.

ಬೆಟ್ಟದ ಮೇಲೆ ಒಂದು ಮುರುಕು ಮನೆ. ಅದರ ಮುಂದೆ ಒಂದು ಕೊಳ; ಹಿಂದೆ ಒಂದು ಭಾರಿಯ ಮರಗಳ ತೋಪು ಇನ್ನೇನೂ ಇಲ್ಲ. ಇವನು ಹೋಗಿ ಧೈರ್ಯವಾಗಿ ಮನೆಯ ಬಾಗಿಲನ್ನು ತಟ್ಟಿದನು. ಮೂರು ಸಲ ತಟ್ಟಿದ ಮೇಲೆ ಮುದುಕಿಯೊಬ್ಬಳು ಒಂದು ಬಾಗಿಲು ತೆಗೆದು "ಯಾರಪ್ಪಾ ಅದು?" ಎಂದಳು.

ಆ ಮುದುಕಿಯ ಮುಖವೋ? ಹಲ್ಲೋ? ಕಣ್ಣೋ? ವೇಷವೋ? ಯಾರೇ ಆಗಲಿ, ಹೆದರಿಕೊಳ್ಳಬೇಕು. ಅಂಥಾದ್ದರಲ್ಲಿಯೂ ಇವನು ಹೆದರದೆ "ನಾನು ಹಾದಿಹೋಕ. ದಾರಿ ತಪ್ಪಿ ಇಲ್ಲಿಗೆ ಬಂದುಬಿಟ್ಟೆ. ಹೊಟ್ಟೆ ಹಸಿಯುತ್ತಿದೆ. ಏನಾದರೂ ಕೊಡಿಯಮ್ಮ!" ಎಂದನು.

ಮುದುಕಿಯು "ಆಗಬಹುದು. ಆದರೆ, ನಾನು ಸುಮ್ಮನೆ ಹಿಟ್ಟು ರೊಟ್ಟಿ ಕೊಡುವುದಿಲ್ಲ. ನೀನು ಅದಕ್ಕಾಗಿ ದುಡಿದು ಸಂಪಾದಿಸಿಕೊಳ್ಳ ಬೇಕು" ಎಂದಳು. ಬ್ಯಾಂಡಿನವನು "ಬಹು ಸಂತೋಷದಿಂದ ಅಗತ್ಯವಾಗಿ ದುಡಿಯುತ್ತೇನೆ" ಎಂದೊಪ್ಪಿಕೊಂಡು ಊಟಮಾಡಿದನು.

ಮರುದಿನ ಬೆಳಗೆದ್ದು ಮುದುಕಿಯು ತಂಗಳೂಟ ಬಡಿಸಿ "ನಡೆ ಕೆಲಸಕ್ಕೆ" ಎಂದು ಕೊಳದ ಹತ್ತಿರಕ್ಕೆ ಕರೆದುಕೊಂಡು ಬಂದಳು. ಅಲ್ಲಿ ತಾನು ಇಟ್ಟುಕೊಂಡಿದ್ದ ಉಕ್ಕಿನ ಬೆರಳು ಟೋಪಿ (ದರ್ಜಿಯವರು ಹಾಕಿಕೊಳ್ಳುವುದು) ತೆಗೆದುಕೊಟ್ಟು "ಇದರಿಂದ ಈ ಕೊಳದ ನೀರೆಲ್ಲ ಎತ್ತಿ ಹೊರಗೆ ಹಾಕಬೇಕು. ಇಲ್ಲಿರುವ ಮೀನುಗಳನ್ನೆಲ್ಲ ಅವುಗಳ ರಂಗು, ತೂಕ ನೋಡಿ, ರಂಗಿಗೆ ತೂಕಕ್ಕೆ ತಕ್ಕಂತೆ ಬೇರೆಬೇರೆಯಾಗಿ ಜೋಡಿಸಿಡಬೇಕು. ಇದಿಷ್ಟು ಸಂಜೆಯೊಳಗಾಗಿ ಮಾಡಿರಬೇಕು. ನಾನು ಸಂಜೆಗೆ ಬಂದು ನೋಡುತ್ತೇನೆ" ಎಂದು ಹೇಳಿ ಅಲ್ಲಿ ನಿಲ್ಲದೆ ಹೊರಟುಹೋದಳು.

ಇವನೂ ಹಿಂದೆಗೆಯದೆ ಆ ಟೋಪಿಯಲ್ಲಿ ನೀರು ಎತ್ತಿ ಸುರಿದನು. ಆದರೇನು ಫಲ? ಒಪ್ಪೊತ್ತೆಲ್ಲ ಎತ್ತಿ ಸುರಿದರೂ ಒಂದು ಕೊಡ ನೀರಾಗಲಿಲ್ಲ. ಇವನಿಗೆ ಆಯಾಸ ಮಾತ್ರ ಬೇಕಾದಷ್ಟು ಆಯಿತು. ಆ ವೇಳೆಗೆ ಒಬ್ಬ

ಚೆಂದುಳ್ಳ ಚೆಲುವೆಯು ಅವನಿಗೆ ಅನ್ನವನ್ನು ತಂದಳು. ಅವಳು ಅವನನ್ನು ಮಾತಾಡಿಸುತ್ತಾ "ನಿನಗೆ ಬಹಳ ಆಯಾಸವಾಗಿದೆ. ಅಲ್ಲ?" ಎಂದಳು. ಬ್ಯಾಂಡಿನವನು "ಆಯಾಸದ ಯೋಚನೆಯಿಲ್ಲ. ಆದರೆ, ಆಯಾಸಪಟ್ಟರೂ ಫಲವಿಲ್ಲ ಎಂದು ಯೋಚನೆ ಅಷ್ಟೆ!" ಎಂದನು. ಅದಕ್ಕಾಗಿ ಚೆಲುವೆಯು "ನೀನು ನಿಜವಾಗಿ ದುಡಿದಿದ್ದೀಯೆ! ಚಿಂತೆಯಿಲ್ಲ. ನೀನು ಊಟಮಾಡಿ ನನ್ನ ತೊಡೆಯಮೇಲೆ ತಲೆಯಿಟ್ಟುಕೊಂಡು ಮಲಗಿಕೊ" ಎಂದಳು.

ಬ್ಯಾಂಡಿನವನಿಗೆ ಎಷ್ಟೋ ಸಂತೋಷವಾಗಿ ಹಾಗೇ ಮಾಡಿದನು. ಅವನಿಗೆ ನಿದ್ದೆ ಬರುತ್ತಲೂ ಆ ಹುಡುಗಿಯು ತನ್ನ ಕೈಯಲ್ಲಿದ್ದ ಮಂತ್ರದ ಉಂಗುರವನ್ನು ಉಜ್ಜಿ "ಈ ಕೊಳದ ನೀರೆಲ್ಲ ಹೊರಟುಹೋಗಲಿ" ಎಂದಳು. ಅಲ್ಲಿದ್ದ ನೀರೆಲ್ಲ ಆವಿಯಾಗಿ ಎದ್ದು ಹೋಗಿ ಮೋಡಗಳಲ್ಲಿ ಸೇರಿಕೊಂಡಿತು. "ಇಲ್ಲಿರುವ ಮೀನೆಲ್ಲ ಬಂದು ರಂಗು ತೂಕಗಳಿಗೆ ತಕ್ಕಂತೆ ಜೋಡಿಸಿಕೊಳ್ಳಲಿ" ಎಂದಳು. ಮೀನುಗಳೆಲ್ಲ ಬಂದು ಹಾಗೆಯೇ ಜೋಡಿಸಿಕೊಂಡುವು.

ಬ್ಯಾಂಡಿನವನು ಏಳುವ ಹೊತ್ತಿಗೆ ಇದಿಷ್ಟೂ ಆಗಿಹೋಗಿತ್ತು. ಒಂದು ಮೀನು ಮಾತ್ರ ಇನ್ನೂ ಕೆಸರಿನಲ್ಲಿ ಬಿದ್ದು ಒದ್ದಾಡುತ್ತಿತ್ತು. "ಇದೇನು ಒಂದು ಮೀನು ಮಾತ್ರ ಉಳಿದಿದೆಯಲ್ಲ?" ಎನ್ನಲು, ಅವಳು, "ಆ ಮುದುಕಿ ಮಂತ್ರಸಾನಿ. ಅವಳು ಬಂದು 'ಈ ಮೀನೇಕೆ ಜೋಡಿಸಲಿಲ್ಲ?' ಎನ್ನುತ್ತಾಳೆ. ಆಗ ಅದನ್ನು ತೆಗೆದು 'ಅದು ನಿನಗೆ ಕಣೇ ಮಂತ್ರಸಾನಿ' ಎಂದು ಅವಳ ಮೊಕದ ಮೇಲೆ ಎಸೆ" ಎಂದು ಹೇಳಿ ಹೊರಟು ಹೋದಳು.

ಬ್ಯಾಂಡಿನವನು ತನ್ನ ಅದೃಷ್ಟಕ್ಕೆ ಹಿಗ್ಗುತ್ತಾ ಕುಳಿತಿರುವಾಗ ಮುದುಕಿಯು ಬಂದಳು. ಎಲ್ಲವೂ ಹುಡುಗಿಯು ಹೇಳಿದ್ದ ಹಾಗೇ ನಡೆಯಿತು. ಮುದುಕಿಯು ಮೀನಿನೇಟು ತಿಂದರೂ ಏನೂ ಇಲ್ಲದವಳ ಹಾಗೇ ಇದ್ದು, "ನಾಳೆಯಿನ್ನೊಂದು ಕೆಲಸ ಆಗಬೇಕು. ಇವೊತ್ತು ಗೆದ್ದುಕೊಂಡೆ" ಎಂದು ಹೇಳಿದಳು.

ಮರುದಿನ ಆ ತೋಪನ್ನು ತೋರಿಸಿ, "ಈ ತೋಪಿನ ಮರಗಳನ್ನೆಲ್ಲ ಕೆಡವಿ, ಒಡೆದು ಸೌದೆಯೆಲ್ಲ ಅಣಿಯಾಗಿ ದಪ್ಪಸಣ್ಣ ನೋಡಿ ಜೋಡಿಸಿರಬೇಕು" ಎಂದು ಹೇಳಿ, ಒಂದು ಕೊಡಲಿ, ಒಂದು ಗರಗಸ, ಒಂದು ಸಣ್ಣ ಉಳಿ, ಒಂದು ದಪ್ಪ ಉಳಿ, ಒಂದು ಕೊಡತಿ ಕೊಟ್ಟಳು. ಆದರೆ ಅವೆಲ್ಲ ಸೀಸದವು.

ಬ್ರ್ಯಾಂಡಿಸವನಿಗೆ ಸೋಜಿಗವಾಯಿತು. "ಸೀಸದ ಕೊಡಲಿ ಗರಗಸಗಳಿಂದ ಹೆಮ್ಮರವನ್ನು ಕೆಡುಹುವುದು ಎಂತು? ಆಗಲಿ ಪ್ರಯತ್ನವಂತೂ ಮಾಡೋಣ" ಎಂದು ಹೊರಟನು. ಎತ್ತಿ ಹೊಡೆದರೆ ಸೀಸದ ಕೊಡಲಿಯು ಮುದುರಿಕೊಳ್ಳುವುದು. ಹಾಗೇ ಒಂದಷ್ಟು ಹೊತ್ತು ತನಗೆ ಆಯಾಸವಾಗುವವರೆಗೂ ಆ ಕೆಲಸದಲ್ಲಿದ್ದು ಒಂದು ಕುಳಿತನು.

ಹಿಂದಿನ ದಿನದಂತೆಯೇ ಹುಡುಗಿಯು ಅನ್ನವನ್ನು ತಂದಳು. ಎಲ್ಲವೂ ಹಿಂದಿನ ದಿನದಂತೆಯೇ ಆಯಿತು. ಉಳಿದಿದ್ದ ಒಂದು ಕೊಂಬೆಯನ್ನು ತೆಗೆದುಕೊಂಡು "ಇದು ನಿನಗೆ ಕಣೇ ಮಂತ್ರಸಾನಿ!' ಎಂದು ಹೇಳಿ ಒಂದು ಏಟೂ ಕೊಟ್ಟನು. ಮುದುಕಿಯೂ ಅದನ್ನು ಗಮನಿಸಿದೆ "ನಾಳೆ ಇದೆ" ಎಂದುಕೊಂಡು ಹೊರಟುಹೋದಳು.

ಮರುದಿನ ಬೆಳಗಾಗುತ್ತಲೂ ಮುದುಕಿಯು ಅವನನ್ನು ಕರೆದುಕೊಂಡು ಬಂದು 'ಈ ಸೌದೆಯನ್ನೆಲ್ಲ ಮತ್ತೆ ಗುಡ್ಡೆ ಹಾಕಿ ಭಾರಿಯ ಬೆಂಕಿ ಕೊಂಡ ಮಾಡು' ಎಂದು ಹೇಳಿ ಹೊರಟುಹೋದಳು. ಅಂದೂ ಹಿಂದಿನ ದಿನಗಳಂತೆಯೇ ಆಯಿತು. ಹುಡುಗಿಯು 'ನೀನು ಹೆದರಬೇಡ, ಮುದುಕಿಯು ಏನು ಹೇಳಿದರೆ ಅದು ಮಾಡಿಬಿಡು. ನಿನಗೆ ಏನೂ ಆಗುವುದಿಲ್ಲ. ಕೊನೆಗೆ ಮುದುಕಿಯನ್ನು ಎತ್ತಿ ಬೆಂಕಿಯಲ್ಲಿ ಹಾಕಿಬಿಡು. ಎಲ್ಲವೂ ಸರಿಹೋಗುವುದು' ಎಂದು ಹೇಳಿ ಹೋದಳು.

ಮುದುಕಿಯು ಬರುವ ವೇಳೆಗೆ ಬೆಂಕಿಯು ಧಗಧಗಾಯಮಾನವಾಗಿ ಉರಿಯುತ್ತಿತ್ತು. ಅವಳು ಬಂದು, "ಆಹಾಹಾ! ಬಹಳ ಚಳಿ. ಅದೇನದು?

ನಡುವೆ ಇರುವ ಕೊಂಟು ಹತ್ತಿಕೊಂಡೇ ಇಲ್ಲ. ಹೋಗಿ ಅದನ್ನು ಎಳೆದು ಕೊಂಡು ಬಾ" ಎಂದಳು. ಬ್ಯಾಂಡಿನವನು ಕೊಂಚವೂ ಅಂಜದೆ ಬೆಂಕಿ ಯೊಳಕ್ಕೆ ನುಗ್ಗಿ ಆ ಕೊಂಟನ್ನು ಎಳೆದುಕೊಂಡು ಬಂದನು. ಅವನ ಕೂದಲೂ ಕೂಡ ಚುಳ್ಳಿನ್ನಲಿಲ್ಲ.

ಅವನು ಕೊಂಟನ್ನು ಬೆಂಕಿಯಿಂದ ಎಳೆದುಕೊಂಡು ಈಚೆಗೆ ಬಂದು ಅದನ್ನು ನೆಲದಮೇಲೆ ಹಾಕಿದನೋ ಇಲ್ಲವೊ, ಅದು ತಟ್ಟನೆ ಹೆಣ್ಣಾಗಿ ಅವನ ಎದುರಿಗೆ ನಿಂತಿತು. ಆ ಅಲಂಕಾರ, ಆ ಸೊಬಗು, ಆ ಠೀವಿ, ಆ ಚೆಲುವು ಅವನದುವರೆಗೆ ಎಲ್ಲಿಯೂ ನೋಡಿರಲಿಲ್ಲ. ಅವಳೇ ರಾಜಕುಮಾರಿಯಿರಬೇ ಕೆಂದುಕೊಂಡು ಅವಳ ಕೈ ಹಿಡಿದುಕೊಳ್ಳಲು ಮುಂದೆನುಗ್ಗಿದನು.

ಮುದುಕಿಯು, "ಅಪ್ಪಾ! ಅದಷ್ಟು ಸುಲಭವಲ್ಲ" ಎಂದು ತಟ್ಟನೆ ಅವಳನ್ನು ಹೊತ್ತುಕೊಂಡು ಓಡಲು ಮೊದಲು ಮಾಡಿದಳು. ಕೂಡಲೇ ಅವನು ಅವಳನ್ನು ಅಡ್ಡಗಟ್ಟಿ, ಹುಡುಗಿಯನ್ನು ಬಿಡಿಸಿಕೊಂಡು, ಅವಳನ್ನೆತ್ತಿ ಬೆಂಕಿಯ ಕೊಂಡದೊಳಕ್ಕೆ ಹಾಕಿದನು.

ಹುಡುಗಿಯು ಅವನಿಗೆ, "ನನಗಾಗಿ ಎಷ್ಟೋ ಕಷ್ಟಪಟ್ಟೆ" ಎಂದು ಬೇಕಾದ ಹಾಗೆ ಉಪಚಾರ ಮಾಡಿ ಅವನನ್ನೇ ಮದುವೆಯಾದಳು.

---

# ಗೃಧ್ರರಾಜ

ಗುರುತು ಕಾಣದ ರಾಜ್ಯದಲ್ಲಿ ಹೆಸರಿಲ್ಲದ ರಾಜನು ಬಲು ಹೆಸರುವಾಸಿ ಯಾಗಿ ಅರಸುತನ ಮಾಡುತ್ತಿದ್ದನು. ಅವನಿಗೆ ಗಂಡು ಮಕ್ಕಳಿಲ್ಲ. ಒಂದೇ ಒಂದು ಹೆಣ್ಣು ಮಗು. ಅದಕ್ಕೋ ಬೆಳಗಾದರೆ ಒಂದು ವ್ಯಾಧಿ. ಯಾವ ಘನವಂತ ಪಂಡಿತನು ಬಂದು ಔಷಧ ಕೊಟ್ಟರೂ ಗುಣವಾಗಲೊಲ್ಲದು. ಕೊನೆಗೆ ಯಾವನೋ ಒಬ್ಬ ಬೈರಾಗಿಯು ಬಂದು, "ಇದೊಂದು ವಿಚಿತ್ರ

ವ್ಯಾಧಿ. ಇದಕ್ಕೆ ಸೇಬಿನ ಹಣ್ಣೇ ಔಷಧ. ಒಂದೇ ಗಿಡದಲ್ಲಿ ಆದ ಒಂದು ಬುಟ್ಟಿ ಹಣ್ಣು ತಂದು ಅದರಲ್ಲಿ ಒಂದು ಚೂರೂ ಬಿಡದೆ ತಿಂದರೆ ಈ ರೋಗ ನಿರ್ಮೂಲವಾಗುತ್ತದೆ" ಎಂದು ಹೇಳಿದನು.

ಅರಸನಿಗೆ ಮಗಳಿಗೆ ಸದ್ಯ ಗುಣವಾದರೆ ಸಾಕು ಎನ್ನುವ ಹಾಗಿತ್ತು. ಆ ಅವಸರದಲ್ಲಿ "ಯಾರಾದರೂ ಸರಿಯೆ, ಅರಸುಮಗಳಿಗೆ ಗುಣವಾಗುವಂತಹ ಒಂದು ಬುಟ್ಟಿ ಸೇಬಿನ ಹಣ್ಣು ತಂದುಕೊಟ್ಟರೆ, ಅವರಿಗೆ ನನ್ನ ಮಗಳನ್ನು ಕೊಟ್ಟು ಮದುವೆ ಮಾಡುತ್ತೇನೆ" ಎಂದು ತನ್ನ ಸೀಮೆಯಲ್ಲೆಲ್ಲ ಡಂಗುರ ಹೊಯಿಸಿದನು. ಆ ಮಾತು ಕೇಳಿ ಎಲ್ಲರಿಗೂ ಆಸೆಯಾಯಿತು. ದೊರೆಮನೆ ನಂಟತನ, ಕೊನೆಗೆ ಅರಸುತನ ಎಂದು ಎಲ್ಲರಿಗೂ ಬಾಯಲ್ಲಿ ನೀರೂರಿತು.

ರಾಜಧಾನಿಯ ಮಗ್ಗುಲಲ್ಲಿಯೇ ಒಂದು ಹಳ್ಳಿ. ಅಲ್ಲೊಬ್ಬ ತೋಟಗಾರ. ಅವನ ತೋಟದ ಸೇಬು ಬಹಳ ಹೆಸರುವಾಸಿಯಾದುದು. ಅವನೂ ಡಂಗುರವನ್ನು ಕೇಳಿದ. "ಸರಿ! ಒಂದು ಬುಟ್ಟಿ ಸೇಬಿನ ಹಣ್ಣು ಏನು ಮಹಾ!" ಎಂದುಕೊಂಡು ಹಿರಿಯ ಮಗನನ್ನು ಕರೆದು, "ಹೋಗು! ಒಳ್ಳೆಯ ಹಣ್ಣು ನೋಡಿ ಒಂದು ಬುಟ್ಟಿ ಆರಿಸಿಕೊಂಡು ಹೋಗಿ ದೊರೆಗೆ ಕೊಡು, ನಿನ್ನ ಅದೃಷ್ಟ ನೋಡೋಣ!" ಎಂದನು.

ಅವನು ಆಗಲಿ ಎಂದು ಆರಿಸಿ ಆರಿಸಿ ಒಂದು ಬುಟ್ಟಿ ಹಣ್ಣು ತೆಗೆದುಕೊಂಡು ಹೊರಟನು. ದಾರಿಯಲ್ಲಿ ಅವನಿಗೇನು ಮುಂದಿನ ಯೋಚನೆಯೇ ಯೋಚನೆ! "ಈ ಹಣ್ಣು ತಿಂದರೆ ಅರಸು ಮಗಳಿಗೆ ಗುಣವಾಗುತ್ತದೆ. ಅವಳನ್ನು ನನಗೇ ಕೊಟ್ಟು ಮದುವೆ ಮಾಡುತ್ತಾರೆ. ಆಮೇಲೆ ಎಂದಿದ್ದರೂ ನಾನೇ ದೊರೆಯಾಗುತ್ತೇನೆ. ನಾನು ದೊರೆಯಾದಮೇಲೆ, ನಮ್ಮ ತೋಟ ಬಿಟ್ಟು ಇನ್ನೆಲ್ಲಿಯೂ ಔಷಧಕ್ಕೆ ಬೇಕು ಎಂದರೂ ಒಂದು ಎಲೆ ಕೂಡ ಸಿಕ್ಕದಹಾಗೆ ಎಲ್ಲೆಲ್ಲಿ ಇರುವ ಸೇಬಿನ ಗಿಡಗಳನ್ನೂ ಹೊಡೆಸಿ ಹಾಕಿಬಿಡಬೇಕು. ಹಾಗೆ ಮಾಡಿದರೆ ನಮ್ಮ ತೋಟದ ಹಣ್ಣು ರೂಪಾಯಿಗೆ ಒಂದು

ಮಾರಬಹುದು. ಬೇಕಾದಷ್ಟು ಹಣಮಾಡಬಹುದು ಎಂದು ಯೋಚಿಸುತ್ತಾ ಬರುತ್ತಿದ್ದನು.

ದಾರಿಯಲ್ಲಿ ಒಬ್ಬ ಮುದುಕ ಸಿಕ್ಕಿ "ಏನಯ್ಯಾ! ಬುಟ್ಟಿಯಲ್ಲಿ ಏನಿಟ್ಟುಕೊಂಡಿದ್ದೀಯೆ?" ಎಂದನು. ಇವನು ಮುಂದಿನ ಯೋಚನೆಯಲ್ಲಿ ಮುಳುಗಿದ್ದವನು "ಇವನಿಗೇಕೆ? ನನ್ನ ಬುಟ್ಟಿಯಲ್ಲಿ ಏನಿದ್ದರೆ ಇವನಿಗೇನು?" ಎಂದು ಕೋಪಮಾಡಿಕೊಂಡು "ಮಂಡರಗಪ್ಪೆ!" ಎಂದನು. ಮುದುಕನು ನಕ್ಕು "ಹಾಗೇ ಆಗಲಿ" ಎಂದು ಮುಂದೆ ಹೋದನು.

ಅರಮನೆಯ ಬಾಗಿಲಿಗೆ ಹೋಗಿ ಈ ತರುಣನು ಅರಸನಿಗೆ ತಾನು ಬುಟ್ಟಿಯ ಹಣ್ಣು ತಂದಿರುವುದಾಗಿ ಹೇಳಿಕಳುಹಿಸಿದನು. ಅರಸನು ಸಂತೋಷದಿಂದ ಬರಮಾಡಿಕೊಂಡನು. ಇವನೂ ಬಲು ವೈಯಾರದಿಂದ ಹಣ್ಣಿನ ಬುಟ್ಟಿಯನ್ನು ದೊರೆಯ ಮುಂದಿಟ್ಟು "ಮಹಾಸ್ವಾಮಿಯೇ ತೆಗೆದು ನೋಡಬೇಕು. ಪರಮಾಯಿಷಿ ಹಣ್ಣು!" ಎಂದನು. ಅರಸನೂ ನಂಬಿಕೆಯಾಗಿ ಬುಟ್ಟಿಯೊಳಕ್ಕೆ ಕೈ ಹಾಕಿದನು. ಹಾಕಿದುದೇ ತಡ, ಒಳಗಿದ್ದ ಮಂಡರಗಪ್ಪೆಯು ಕುಟುಕಿತು. ಅರಸನು ಹಾ! ಎಂದು ಮೇಲಕ್ಕೆ ಹಾರಿದನು. ಬುಟ್ಟಿಯು ಅವನ ಕೈಯಿಂದ ಕೆಳಕ್ಕೆ ಬಿತ್ತು. ಒಳಗಿದ್ದ ಮಂಡರಗಪ್ಪೆಗಳು ಬುಸುಗುಟ್ಟುತ್ತಾ ಈಚೆಗೆ ಬಂದುವು. ಇವನಿಗೆ ತಕ್ಕ ಶಾಸ್ತಿಯಾಗಿ ಇವನೂ ಅರಮನೆಯಿಂದ ಅಳುತ್ತಾ ಮನೆಗೆ ಬಂದನು.

ಗೌಡನು ಇದೇಕೆ ಹೀಗಾಯಿತು ಎಂದು ಆಶ್ಚರ್ಯಪಟ್ಟು ಎರಡನೆಯ ಮಗನನ್ನು ಕರೆದು "ಈ ಸಲ ನೀನು ಹೋಗು. ದಾರಿಯಲ್ಲಿ ಬುಟ್ಟಿ ಅವರಿವರ ಕೈಗೆ ಕೊಟ್ಟೀಯೆ!" ಎಂದು ಎಚ್ಚರಿಕೆ ಹೇಳಿ ಕಳುಹಿಸಿದನು ಅವನು ಬಲುಬಲು ಸೊಗಸಾದ ಹಣ್ಣು ಕೊಯ್ದು ಬುಟ್ಟಿಗೆ ತುಂಬಿಕೊಂಡು ಹೊರಟನು. ದಾರಿಯಲ್ಲಿ ಅದೇ ಮುದುಕನು ಸಿಕ್ಕಿದನು. ಇವನಿಗೂ ರೇಗಿತು "ಇದರ ತುಂಬ ಹೆಂಟೆಗೊದ್ದ ಇದೆ." ಎಂದನು. ಮುದುಕನು ನಗುತ್ತಾ "ಹಾಗೇ ಆಗಲಿ" ಎಂದು ಮುಂದೆ ಹೋದನು.

ಅರಮನೆಯ ಹೆಬ್ಬಾಗಿಲಿನಲ್ಲಿಯೇ ಕಾವಲುಗಾರನು ಇವನನ್ನು ತಡೆದನು. ಇವನು ಕಾವಲುಗಾರನನ್ನು ಒಪ್ಪಿಸಿ ಒಳಗೆ ಹೋಗುವುದಕ್ಕೆ ಇದ್ದಬದ್ದ ಬುದ್ಧಿಯೆಲ್ಲಾ ಉಪಯೋಗಿಸಬೇಕಾಯಿತು. ಕೊನೆಗೆ ಹೇಗೆಹೇಗೋ ನಂಚಿಸಿ ಅರಸನ ಒಳಿಗೆ ಹೋದನು. ಅರಸನು ಈ ಸಲ ತಾನೇ ಬುಟ್ಟಿಯನ್ನು ತೆಗೆಯಲಿಲ್ಲ. ಆಳಿನ ಕೈಯಲ್ಲಿ ತೆಗೆಸಿದನು. ಒಳಗಿದ್ದ ಹೆಂಟೇಗೊದ್ದಗಳು ಬುಳಕ್ಕನೆ ಈಚೆಗೆ ಬಂದು ಸಿಕ್ಕಿದ ಕಡೆ ಓಡಿದುವು. ದರ್ಬಾರಿನಲ್ಲಿ ಇದ್ದವರೆಲ್ಲ ಚೆಲ್ಲಾಪಿಲ್ಲಿಯಾದರು. ಓಲಗದ ಶಿಸ್ತೆಲ್ಲಾ ಕೆಟ್ಟುಹೋಯಿತು. ಅರಸನಿಗೆ ಮಿತಿಮೀರಿದ ಕೋಪವು ಬಂತು. ಇವನ ಮೈಯಲ್ಲಿದ್ದ ಮೂಳೆಗಳೆಲ್ಲ ಮುರಿದು ಪುಡಿಪುಡಿಯಾಗಿ ಇವನು ಮನೆಗೆ ಬಂದು ಸೇರಿದುದೇ ದುಸ್ತರವಾಯಿತು.

ತೋಟಗಾರನಿಗೆ ಇನ್ನೂ ಒಬ್ಬ ಮಗನಿದ್ದನು. ಅವನ ಹೆಸರು ಹ್ಯಾನ್ಸ್. ಅವನಿಗೆ ತಾನೂ ಅರಮನೆಗೆ ಹೋಗಿ ಬರಬೇಕು ಎನ್ನಿಸಿತು. ತಂದೆತಾಯಿಗಳನ್ನು ಪೀಡಿಸಿದನು. ತಂದೆಯು "ಅಯ್ಯೋ! ನೀನೊಬ್ಬ ಮಂಕುದಿಣ್ಣೆ. ನಿನಗೆ ತಲೆಯಲ್ಲಿ ಬುದ್ಧಿಯೇ ಇಲ್ಲ. ನೀನು ಹೋಗಿ ಏನು ಮಾಡುವೆ?" ಎಂದು ಗದರಿಸಿಕೊಂಡನು. ಆದರೂ ಅವನು ಬಿಡಲಿಲ್ಲ. ಬಹಳವಾಗಿ ಗೋಳಾಡಿದನು. ಕೊನೆಗೆ ತಾಯಿಯೂ ಬಲವಂತಮಾಡಲು ತಂದೆಯು ತಾನೇ ಬಂದು ಬುಟ್ಟಿ ಒಳ್ಳೆಯ ಹಣ್ಣುಗಳನ್ನು ಆರಿಸಿ ಕೊಟ್ಟು ಕಳುಹಿಸಿದನು.

ಅವನು ದಾರಿಯಲ್ಲಿ ಹೋಗುತ್ತಿರುವಾಗ ಅವನ ಅಣ್ಣಂದಿರನ್ನು ಕಂಡು ಸಂಧಿಸಿದ್ದ ಮುದುಕನು ಇವನಿಗೂ ಕಾಣಿಸಿಕೊಂಡು "ಏನಯ್ಯಾ! ಬುಟ್ಟಿಯಲ್ಲಿ ಏನಿದೆ?" ಎಂದು ಕೇಳಿದನು. ಇವನು ಸಹಜವಾಗಿ "ಬುಟ್ಟಿಯತುಂಬಾ ಸೇಬಿನ ಹಣ್ಣು ಇದೆ. ದೊರೆಯ ಮಗಳಿಗೆ ಕೊಟ್ಟು ಅವಳ ರೋಗವನ್ನು ಗುಣಮಾಡಿ ಅವಳನ್ನು ಮದುವೆಮಾಡಿಕೊಳ್ಳಬೇಕು ಎಂದು ಹೊರಟಿದ್ದೇನೆ," ಎಂದನು. ಮುದುಕನು ನಿಜವನ್ನು ಹೇಳಿದನೆಂದು ಸಂತೋಷಪಟ್ಟುಕೊಂಡು "ಹಾಗೇ ಆಗಲಿ" ಎಂದು ಹರಸಿ ಹೋದನು.

ಅರಮನೆಯ ಪಹರೆಯವನು ಈಗಲೂ ಮೋಸವಾಗಿದೆಯೆಂದು ಅವನನ್ನು ಒಳಕ್ಕೆ ಬಿಡದೆ ಹೋದನು. ಹ್ಯಾಕಸನು ಬುಟ್ಟಿಯನ್ನು ತೆರೆದು ಹಣ್ಣು ತೋರಿಸಿ ಅವನಪ್ಪಣೆ ಪಡೆದು ಅರಸನ ಬಳಿಗೆ ನೇರವಾಗಿ ಹೋದನು. ಅರಸನೂ ಇವನ ಸೌಮ್ಯ ಮುಖವನ್ನು ಕಂಡು ಇವನು ಹಣ್ಣೇ ತಂದಿರಬಹುದು ಎಂದು ನಂಬಿದನು. ಹ್ಯಾಕಸನು ಮರ್ಯಾದೆಯಿಂದ ಹಣ್ಣಿನ ಬುಟ್ಟಿಯನ್ನು ಒಪ್ಪಿಸಿದನು. ದೊರೆಯು ಒಳ್ಳೆಯ ಚಿನ್ನದ ತಂಬಿಗೆಯ ಹಾಗೆ ಮೆರೆಯುತ್ತಿರುವ ಆ ಹಣ್ಣುಗಳನ್ನು ಕಂಡು ಆನಂದಿಸಿ ಮಗಳ ಬಳಿಗೆ ಕಳುಹಿಸಿದನು.

ಒಂದು ಗಳಿಗೆಯೊಳಗಾಗಿ "ರಾಜಕುಮಾರಿಯು ಆರೋಗ್ಯವಾಗಿರುವಳು" ಎಂದು ಆಳು ಸುದ್ದಿಯನ್ನು ತಂದನು. ಆ ಆಳಿನ ಹಿಂದೆಯೇ ದೊರೆಯ ಮಗಳೂ ಓಡೋಡಿ ಬಂದಳು. "ಅಪ್ಪಾಜೀ! ಈ ಹಣ್ಣು ಒಂದು ಚೂರು ತಿನ್ನುತ್ತಲೂ ನನ್ನ ರೋಗವೆಲ್ಲಿ ಹೋಯಿತೋ?" ಎಂದು ಸಂತೋಷದಿಂದ ಕುಣಿದಳು.

ಮಗಳಿಗೆ ರೋಗವು ಗುಣವಾಯಿತೆಂದು ಸಂತೋಷವಾದರೂ ಯಾವನೋ ಒಬ್ಬ ಯಃಕಶ್ಚಿತನನ್ನು ಅಳಿಯನನ್ನು ಮಾಡಿಕೊಳ್ಳಬೇಕಲ್ಲ ಎಂದು ಅವನಿಗೆ ಸಂಕಟವೂ ಆಯಿತು. ಕೊನೆಗೂ ಅವನಿಗೆ ಮಗಳನ್ನು ಕೊಡಲು ಒಪ್ಪದೆ, "ಏನಾದರೂಮಾಡಿ ಈ ಸಂಬಂಧ ತಪ್ಪಿಸಬೇಕು" ಎಂದು ಮನಸ್ಸಿನಲ್ಲಿ ಸಿದ್ಧಾಂತಮಾಡಿಕೊಂಡು, ಬಾಯಲ್ಲಿ ಬೆಟ್ಟದಷ್ಟು ಉಪಚಾರ ಹೇಳುತ್ತ, "ಅಯ್ಯಾ! ನೀನು ಒಬ್ಬ ಮಹಾಪುರುಷನಾಗಿರಬೇಕು, ಇಲ್ಲದಿದ್ದರೆ ನೀನು ತಂದ ಹಣ್ಣನ್ನು ತಿನ್ನುತ್ತಿದ್ದ ಹಾಗೆಯೇ ಆ ರೋಗವು ಬಿಟ್ಟುಹೋಗುತ್ತಿತ್ತೆ? ಎಂತಹ ಭಾರಿಯ ರೋಗ, ಮಹಾಮಹಾ ವೈದ್ಯರೆಲ್ಲ ಕೈಬಿಟ್ಟಿದ್ದರಲ್ಲಾ!" ಎಂದು ಬಿನ್ನಾಣಮಾಡಿ, ಕೊನೆಗೆ "ಅಯ್ಯಾ! ನಮ್ಮ ಮನೆಯಲ್ಲಿ ಕೆಲವು ಸಂಪ್ರದಾಯಗಳುಂಟು. ಈ ಮನೆಗೆ ಅಳಿಯಂದಿರಾಗುವ ಪುಣ್ಯಾತ್ಮರು ಕೆಲವು ಕೆಲಸಗಳನ್ನು ಮಾಡ

ಬೇಕು. ಅಂತಹ ನಿರ್ಬಂಧವಿಲ್ಲದೆ ಇದ್ದಿದ್ದರೆ, ನನ್ನ ಮಾತಿನಂತೆ ಈ ತಕ್ಷಣ ಮದುವೆ ಮಾಡಿಬಿಡುತ್ತಿದ್ದೆ " ಎಂದನು.

ಹ್ಯಾನ್ಸನು "ಆ ನಿರ್ಬಂಧಗಳೇನು? ಅಪ್ಪಣೆಯಾಗಲಿ" ಎಂದನು.

ಅರಸನು "ಮೊದಲನೆಯದಾಗಿ ನೀರಿನ ಮೇಲೂ ನೆಲದ ಮೇಲೂ ಒಂದೇ ಸಮನಾಗಿ ಹೋಗುವಂತಹ ದೋಣಿಯೊಂದನ್ನು ಒಂದೇ ದಿನದಲ್ಲಿ ಮಾಡಿಕೊಂಡು ಬರಬೇಕು" ಎಂದನು.

ಹ್ಯಾನ್ಸನು ಆಗಲಿ ಎಂದು ಹೊರಟನು. ಹ್ಯಾನ್ಸನು ಇಂತಹ ದೋಣಿಯನ್ನು ಮಾಡುವುದು ಹೇಗೆ? ಎಂದು ಯಾರನ್ನು ಕೇಳಿದರೂ, ನಕ್ಕು ಹಾಸ್ಯಮಾಡುವರು. ಹೀಗೆ ಎಲ್ಲರೂ ಹಾಸ್ಯ ಮಾಡಿದರೂ ಅವನ ಎದೆ ಕುಂದಲಿಲ್ಲ. ಕೊನೆಗೆ ಊರಾಚೆ ಹೋಗಿ ಒಂದಷ್ಟು ಮರದ ತುಂಡುಗಳನ್ನು ತಂದು ದೋಣಿಮಾಡುವುದಕ್ಕೆ ಹೊರಟನು.

ಮೊದಲಿನ ಮುದುಕನು ಮತ್ತೆ ಬಂದನು: "ಏನಯ್ಯಾ! ಏನು ಮಾಡುತ್ತಿದ್ದೀಯೆ?" ಎಂದು ಕೇಳಿದನು. ಹ್ಯಾನ್ಸನು ಇದ್ದದ್ದು ಇದ್ದ ಹಾಗೆಯೇ ಹೇಳಲು ಮುದುಕನು ಸಂತೋಷಪಟ್ಟು "ಈ ದಿನ ಸಂಜೆಯ ವೇಳೆಗೆ ಅಂತಹ ದೋಣಿಯು ಆಗುವುದು" ಎಂದು ಹರಸಿ ಹೋದನು. ಸಂಜೆಯ ವೇಳೆಗೆ ನೀರಿನ ಮೇಲೂ ನೆಲದ ಮೇಲೂ ನಡೆಯುವ ದೋಣಿಯನ್ನು ನಡೆಸಿಕೊಂಡು ಅರಸನ ಅಳಿಯನಾಗುವೆನೆಂದು ಹಿಗ್ಗುತ್ತ ಹ್ಯಾನ್ಸನು ಅರಮನೆಗೆ ಬಂದನು.

ಅರಸನಿಗೆ ಹೊಟ್ಟೆಯಲ್ಲಿ ಮೆಣಸಿನಕಾಯಿ ಕಿವಿಚಿದಂತಾಯಿತು. ಆದರೂ ಮೇಲೇನೂ ತೋರಿಸದೆ ಬಹು ಸಂತೋಷಪಟ್ಟಂತೆ ನಟಿಸುತ್ತಾ "ಆಹಾ! ಬಹು ಚೆನ್ನಾಗಿದೆ. ನಾಳೆಯ ದಿನ ನೂರು ಮೊಲಗಳನ್ನು ಕಾಯ್ದು ಬರಬೇಕು" ಎಂದು ಬಹು ವಿಶ್ವಾಸದಿಂದ ಹೇಳಿದನು.

ಹ್ಯಾನ್ಸನು ಆಗಲಿ ಎಂದು ಒಪ್ಪಿಕೊಂಡನು.

ಮರುದಿನ ಬೆಳಗಾಗುತ್ತಿದ್ದ ಹಾಗೇ ಅರಮನೆಯ ಚಾಕರನು ಒಂದು

ನೂರು ಮೊಲಗಳನ್ನು ತಂದನು. ಅವುಗಳನ್ನು ಬಿಡುತ್ತಿದ್ದ ಹಾಗೆಯೇ ಒಂದೊಂದು ಒಂದೊಂದು ಕಡೆ ಹೊರಟುವು. ಹೇಗೆ ಹೇಗೆ ಮಾಡಿದರೂ ಅವು ಒಂದು ಕಡೆ ನಿಲ್ಲವು. ಹೀಗೆ ಒದ್ದಾಡುತ್ತಿರುವಾಗ ಮುದುಕನು ಮತ್ತೆ ಬಂದನು. ಅವನು "ಏನಯ್ಯಾ! ಏನು ಸಮಾಚಾರ" ಎಂದನು. ಹ್ಯಾರ್ಸನು "ಇವೊತ್ತು ಗೆಲ್ಲುವ ಹಾಗೆ ಇಲ್ಲ. ತಾತ!" ಎಂದು ಇದ್ದ ಸಮಾಚಾರವೆಲ್ಲ ಹೇಳಿದನು. ಮುದುಕನು ನಕ್ಕು, "ದಿಗಿಲು ಪಡಬೇಡ. ಈ ಸಿಲ್ಟಿ ತಕೊ. ಇದೊಂದು ಸಲ ಊದಿದರೆ, ಎಲ್ಲೆಲ್ಲಿದ್ದ ಮೊಲಗಳೂ ಓಡೋಡಿಬರುತ್ತವೆ" ಎಂದು ಹೇಳಿ ಒಂದು ಸಿಲ್ಟಿಕೊಟ್ಟು ಹೋದನು.

ಯಾರು ಯಾರೋ ಬಂದು ಹ್ಯಾರ್ಸನನ್ನು "ಒಂದು ಮೊಲಕೊಡು. ನಮಗೊಂದು ಮೊಲಕೊಡು" ಎಂದು ಕೇಳಿದರು. ಹ್ಯಾರ್ಸನು ಕೊಡಲಿಲ್ಲ. ಕೊನೆಗೆ "ಇವೊತ್ತು ದೊರೆಗಳ ಅಡುಗೆ ಮನೆಗೆ ಒಂದು ಮೊಲ ಬೇಕು ಕೊಡಯ್ಯ" ಎಂದು ಅರಮನೆಯ ಊಳಿಗದವನು ಬಂದನು. ಹ್ಯಾರ್ಸನು "ಅರಸುಮಗಳೇ ಬಂದರೆ ಕೊಡುತ್ತೇನೆ" ಎಂದನು. ಅವಳೇ ಬಂದೂ ಬಿಟ್ಟಳು. ಕೊನೆಗೆ ಒಂದು ಮೊಲ ಕೊಟ್ಟೇಕೊಡಬೇಕಾಯಿತು. ಹ್ಯಾರ್ಸನು "ಇರಲಿ. ಇದಕ್ಕೆ ಉಪಾಯ ಇದ್ದೇ ಇದೆ" ಎಂದುಕೊಂಡು ಒಂದು ಮೊಲ ಹಿಡಿದು ಅದನ್ನು ಒಂದು ವಸ್ತ್ರದಲ್ಲಿ ಕಟ್ಟಿ ಅರಸುಮಗಳಿಗೆ ಕೊಟ್ಟನು.

ಅವಳು ಅಷ್ಟು ದೂರ ಹೋದಳೋ ಇಲ್ಲವೋ ಹ್ಯಾರ್ಸನು ಸಿಲ್ಟಿಯನ್ನು ಊದಿದನು. ಆ ಸದ್ದನ್ನು ಕೇಳುತ್ತಲೇ ಮೊಲವು ಒದ್ದಾಡಿ ಈಚೆಗೆ ಬಂದು ಎದ್ದೋಡಿತು. ಸಂಜೆಯಾಗುತ್ತಲೂ ಸಿಲ್ಟಿ ಊದಿ ಮೊಲಗಳ ಲೆಕ್ಕ ನೋಡಿ ಅರಮನೆಗೆ ತಂದು ಒಪ್ಪಿಸಿದನು. ಅರಸನಿಗೆ ಎದೆಬಿರಿದು ಹೋದ ಹಾಗೇ ಆಯಿತು. ಆದರೆ ತಾನೆ ಏನು ಮಾಡುವುದು? ಹ್ಯಾರ್ಸನನ್ನು ಒಪ್ಪಿಕೊಂಡಂತೆ ಬಹಳವಾಗಿ ಹೊಗಳುತ್ತಾ "ಇನ್ನು ಒಂದು ಉಳಿದಿದೆ. ನಿನ್ನಂತಹ ಬುದ್ಧಿವಂತನಿಗೆ ಅದು ತಾನೇ ಏನಸಾಧ್ಯ? ಹೇಳು ಎಂದರೆ ಹೇಳುತ್ತೇನೆ" ಎಂದನು. ಹ್ಯಾರ್ಸನು "ಅಪ್ಪಣೆಯಾಗಲಿ" ಎಂದನು.

ಅರಸನು ಹೇಳಿದನು. "ನೋಡು, ದೂರದ ಪರ್ವತದ ಶಿಖರದ ಮೇಲೆ ಗೃಧ್ರರಾಜನಿದ್ದಾನೆ. ಅವನ ಬಾಲದ ಒಂದು ಗರಿ ತರಬೇಕು. ಆ ಮೇಲೆ ನಾನು ಹೇಳಲಿಲ್ಲ ಎನ್ನಬೇಡ. ಅವನು ಬಹಳ ಕ್ರೂರನಂತೆ. ಮನುಷ್ಯರು ಸಿಕ್ಕಿದರೆ ಹಿಡಿದು ತಿನ್ನುವನಂತೆ. ಉಪಾಯವಾಗಿ ತರಬೇಕು" ಎಂದನು. ಹ್ಯಾನ್ಸನು ಹೆದರಲಿಲ್ಲ. ಹೋಗಿ ಬರುವೆನೆಂದು ಹೊರಟನು.

ಈ ಸಲವೂ ಮುದುಕನು ಸಿಕ್ಕಿದನು. "ಹೆದರಬೇಡ. ನೀನು ಸತ್ಯವಾಗಿರುವವರೆಗೂ ನಿನಗೆ ದಿಗಿಲಿಲ್ಲ ಹೋಗು!" ಎಂದು ಧೈರ್ಯ ಹೇಳಿದನು. ಹ್ಯಾನ್ಸನು ಹೊರಟನು.

ದಾರಿಯಲ್ಲಿ ಒಂದು ಬೆಟ್ಟ ಸಿಕ್ಕಿತು. ಅದರ ಬುಡದಲ್ಲಿ ಒಬ್ಬ ಪಾಳೆಯಗಾರನ ಅರಮನೆ. ಆಗಿನ ಕಾಲದಲ್ಲಿ ಪಾಳೆಯಗಾರರೆಲ್ಲ ಯಾರು ಬಂದರೂ ಅನ್ನ ಹಾಕುವರು. ಹೋಟಲುಗೀಟಲು ಇರಲಿಲ್ಲ. ಆದರಿಂದ ಹ್ಯಾನ್ಸನೂ ಅಲ್ಲಿಗೆ ಹೋದನು. ಅಲ್ಲಿ ಆ ಮಾತು ಈ ಮಾತು ಒಂದು ಇವನು ಗೃಧ್ರರಾಜನ ಬಳಿಗೆ ಹೋಗುವನೆಂಬುದು ತಿಳಿಯಿತು. ಆಗ ಆ ಪಾಳೆಯಗಾರನು "ಅಯ್ಯಾ! ಅಯ್ಯಾ! ಆ ಗೃಧ್ರರಾಜನಿಗೆ ತಿಳಿಯದುದೇ ಇಲ್ಲವಂತೆ! ನನ್ನ ಮಗಳಿಗೆ ಏನೋ ರೋಗ! ಯಾರಿಂದಲೂ ಗುಣ ಮಾಡುವುದಕ್ಕೆ ಸಾಧ್ಯವಿಲ್ಲ. ಇದು ಏಕೆ ವಿಚಾರಿಸಿಕೊಂಡು ಬಾ!" ಎಂದು ಕೇಳಿಕೊಂಡನು. ಹ್ಯಾನ್ಸನು ಒಪ್ಪಿಕೊಂಡು, ಆ ರಾತ್ರಿ ಅಲ್ಲಿಯೇ ತಂಗಿದ್ದು ಮರುದಿನ ಮುಂದಕ್ಕೆ ಹೊರಟನು.

ಅಲ್ಲಿಂದ ಮುಂದೆ ಬಂದರೆ ಇನ್ನೊಬ್ಬ ಪಾಳೆಯಗಾರನ ಅರಮನೆಯು ಸಿಕ್ಕಿತು. ಅಲ್ಲಿ ಅವನು ತನ್ನ ಖಜಾನೆಯ ಬೀಗದ ಕೈಯನ್ನು ಎಲ್ಲಿಯೋ ಇಟ್ಟು ಮರೆತುಬಿಟ್ಟು ಬಲು ಪೇಚಾಡುತ್ತಿದ್ದನು. ಅವನೂ ಇವನ ವಿಷಯವನ್ನು ತಿಳಿದು ಇವನನ್ನು ಬೇಕಾದಹಾಗೆ ಉಪಚರಿಸಿ "ಅಯ್ಯಾ? ನನ್ನ ಖಜಾನೆಯ ಬೀಗದ ಕೈ ಎಲ್ಲಿದೆ ತಿಳಿದುಕೊಂಡು ಬರಬೇಕಯ್ಯಾ! ನನಗೆ

ಬಹಳ ಉಪಕಾರವಾಗುತ್ತದೆ" ಎಂದನು. ಹ್ಯಾಕ್ಸನು ಆಗಲಿ ಎಂದು ಆ ರಾತ್ರಿ ಅಲ್ಲಿದ್ದು ಮುಂದಕ್ಕೆ ಬಂದನು.

ದಾರಿಯಲ್ಲಿ ಒಂದು ಹೊಳೆ ಸಿಕ್ಕಿತು. ಅಲ್ಲೊಬ್ಬ ಧಾಂಡಿಗನು ಬಂದವರನ್ನೆಲ್ಲ ಭುಜದಮೇಲೆ ಕೂರಿಸಿಕೊಂಡು ನದಿಯನ್ನು ದಾಟಿಸುವನು. ಅಲ್ಲಿ ಅವನನ್ನು ಬಿಟ್ಟು ದಾಟಬೇಕೆಂದರೆ ದೋಣಿಯಿಲ್ಲ, ಹರಿಗೋಲಿಲ್ಲ. ಆ ಧಾಂಡಿಗನು ಹ್ಯಾಕ್ಸನು ಹೊರಟಿರುವ ಉದ್ದೇಶವನ್ನು ಅರಿತು "ಅಯ್ಯಾ! ನನ್ನ ವಿಚಾರವನ್ನು ಕೇಳಿಕೊಂಡು ಬಾ. ನನಗೇನು ಹಣೆಬರೆಹ ಇದು, ಹೀಗೆ ಜನರನ್ನು ಹೊರುವುದು ಎಂದು ವಿಚಾರಿಸಿಕೊಂಡು ಬಾ" ಎಂದು ಕೇಳಿಕೊಂಡನು. ಇವನು ಆಗಲಿ ಎಂದು ಮುಂದೆ ಹೊರಟನು.

ಅಲ್ಲಿಂದ ಮುಂದೆ ಒಂದು ಗೊಂಡಾರಣ್ಯ ಸಿಕ್ಕಿತು. ಒಂದುಕಡೆ ಮೆಳೆಗಟ್ಟಿಕೊಂಡು ಹೋಗುವುದಕ್ಕೆ ದಾರಿಯೇ ಇಲ್ಲ. ಇನ್ನೊಂದು ಕಡೆ ಹುಲ್ಲೂ ಕೂಡ ಬೆಳೆಯದ ಒರಿಯ ಉಸುಬಿನ ಬೈಲು. ಇನ್ನೊಂದು ಕಡೆ ಕಾಲಿಟ್ಟರೆ ಹೂತುಕೊಂಡು ಹೋಗುವ ಕೆಸರು. ಇದೆಲ್ಲವನ್ನೂ ದಾಟಿಕೊಂಡು ಹ್ಯಾಕ್ಸನು ಗೃಧ್ರಗಿರಿಯ ಬಳಿಗೆ ಬಂದನು. ಪಾದದಿಂದ ಶಿಖರಕ್ಕೆ ಏರುವುದಕ್ಕೆ ಮೂರುದಿನ ಹಿಡಿಯಿತು. ಕೊನೆಗೆ ಸಂಜೆ ನಾಲ್ಕುಗಂಟೆಯ ವೇಳೆಗೆ ಗೃಧ್ರರಾಜನ ಅರಮನೆಗೆ ಬಂದನು.

ಇವನು ಬರುವ ವೇಳೆಗೆ ಗೃಧ್ರರಾಜನು ಮನೆಯಲ್ಲಿರಲಿಲ್ಲ. ಅವನ ಹೆಂಡತಿಯು ಹ್ಯಾಕ್ಸನ ಮುದ್ದು ಮೊಖವನ್ನು ನೋಡಿ ಮಗನಂತೆ ಭಾಪಿಸಿ ಆದರಿಸಿದಳು. ಇವನ ಕಥೆಯನ್ನೆಲ್ಲಾ ಕೇಳಿ ಅಯ್ಯೋ ಎಂದು ಮರುಕಪಟ್ಟು "ಗೃಧ್ರರಾಜನು ನಿನ್ನನ್ನು ಕಂಡರೆ ತಿಂದುಬಿಡುವನು. ಅದರಿಂದ ನೀನು ಅವನ ಮಂಚದ ಕೆಳಗೆ ಅವಿತಿರು. ಅವನು ಗಾಢನಿದ್ರೆಯಲ್ಲಿರುವಾಗ ಧೈರ್ಯಮಾಡಿ ಒಂದು ಗರಿಯನ್ನು ಕಿತ್ತುಕೋ. ಅವನು ಜಪ್ಪಯ್ಯಾ ಎಂದರೂ ಯಾರೊಡನೆಯೂ ಮಾತನಾಡುವುದಿಲ್ಲ. ಅದರಿಂದ ಉಪಾಯವಾಗಿ ಆತನಿಂದ ನಿನ್ನ ಪ್ರಶ್ನೆಗಳಿಗೆಲ್ಲ ಉತ್ತರ ತೆಗೆದುಕೊಡು

ತ್ತೇನೆ" ಎಂದು ಮಾತುಕೊಟ್ಟು ಅವನಿಗೆ ಆಯಾಸಪರಿಹಾರವಾಗುವಂತೆ ಅನ್ನನೀರು ಕೊಟ್ಟು ಉಪಚಾರಮಾಡಿದಳು.

ಸಂಜೆಯಾಗುತ್ತಿದ್ದ ಹಾಗೆಯೇ ಗೃಧ್ರರಾಜನು ಬಂದನು. ಅವನ ಆ ಭಾರಿಯ ರೆಕ್ಕೆಯ ಬಡಿತಕ್ಕೆ ಸಿಕ್ಕಿದರೆ ಸಾಕು, ಎಂತಹ ಬಲಶಾಲಿಯಾದ ಮನುಷ್ಯನಾದರೂ ಅಪ್ಪಚ್ಚಿಯಾಗಿ ಹೋಗಬೇಕು. ಅಂತಹ ದೊಡ್ಡವನು ಆ ಗೃಧ್ರರಾಜ.

ಅವನು ಬರುತ್ತಿದ್ದ ಹಾಗೆಯೇ ಮೂಗನ್ನು ಅರಳಿಸುತ್ತಾ "ಎಲ್ಲಿಯೋ ಮನುಷ್ಯರವಾಸನೆ! ಮನುಷ್ಯರ ವಾಸನೆ!" ಎನ್ನುತ್ತಲೇ ಬಂದನು. ಅವನ ಹೆಂಡತಿಯು "ಹೌದು, ಈಗ ತಾನೇ ಒಬ್ಬ ಮನುಷ್ಯನು ನಿನ್ನ ಗರಿಯು ಬೇಕೆಂದು ಬಂದಿದ್ದ. ಚೆನ್ನಾಗಿ ಬೈದು ಓಡಿಸಿ ಬಿಟ್ಟೆ. ಏಳು ಊಟಕ್ಕೆ" ಎಂದು ಕೈಕಾಲಿಗೆ ನೀರು ಕೊಟ್ಟು ಬಿಸಿಯಡಿಗೆ ಬಡಿಸಿ, ಕುಡಿಯುವುದಕ್ಕೆ ಹಾಲು ಕೊಟ್ಟಳು. ಗೃಧ್ರರಾಜನಿಗೆ ಬಿಸಿಹಾಲು ಕುಡಿಯುತ್ತಿದ್ದ ಹಾಗೆಯೇ ನಿದ್ದೆ ಬಂದು ಹಾಸಿಗೆಯ ಮೇಲೆ ಮಲಗುವುದೇ ತಡ ಗೊರಕೆ ಹೊಡೆದನು.

ಗೃಧ್ರರಾಜನು ಒಳ್ಳೆಯ ಗಾಢ ನಿದ್ರೆಯಲ್ಲಿರುವಾಗ ಜ್ಯಾಕನು ಉಪಾಯವಾಗಿ ಒಂದು ಗರಿಯನ್ನು ಕಿತ್ತುಕೊಂಡನು. ಕೂಡಲೇ ಅವನಿಗೆ ಎಚ್ಚರವಾಗಿ "ಯಾರೋ ನನ್ನ ಗರಿಯನ್ನು ಎಳೆದರು. ಮನುಷ್ಯರ ವಾಸನೆ. ಎಲ್ಲಿಯೋ ಮನುಷ್ಯನಿದ್ದಾನೆ" ಎಂದನು. ಅವನ ಹೆಂಡತಿಯು "ಆಗಲೇ ಹೇಳಿದೆನಲ್ಲ. ಮನುಷ್ಯ ಬಂದಿದ್ದ, ಓಡಿಸಿದೆ ಎಂದು. ನಿನಗದೇ ಗೀಳು. ಅದಿರಲಿ. ಆ ಪಾಳೆಯಗಾರನ ಮಗಳಿಗೆ ಏಕೆ ಅಂತಹ ಹಡಿರೋಗ?" ಎಂದಳು.

"ಸರಿ. ಈ ಮನುಷ್ಯರಿಗೆ ಎಳ್ಳಷ್ಟೂ ಕೂಡ ಬುದ್ಧಿಯಿಲ್ಲ. ಆ ಹುಡುಗಿಯ ತಲೆ ಕೂದಲು ತೆಗೆದುಕೊಂಡು ಹೋಗಿ ಒಂದು ಕರೀ ಹಕ್ಕಿ ಕುದುರೆ ಲಾಯದಲ್ಲಿ ಗೂಡುಕಟ್ಟಿಕೊಂಡಿದೆ. ಆ ಗೂಡಿನಲ್ಲಿರುವ ಕೂದಲು ತಂದು ಅವಳಿಗೆ ಕೊಡುವವರೆಗೂ ಈ ರೋಗ ಗುಣವಾಗುವುದಿಲ್ಲ. ಅದೆಲ್ಲಾದರೂ ಹೋಗಲಿ. ನನಗೆ ನಿದ್ದೆ. ನನ್ನನ್ನು ಮಾತನಾಡಿಸಬೇಡ."

"ನಿನ್ನ ನಿದ್ದೆ ಇದ್ದೇ ಇದೆ. ಅದಿರಲಿ. ಒಂದಾಯಿತು. ಅದೇನದು? ಆ ಇಸ್ನೊಬ್ಬ ಪಾಳೆಯಗಾರನ ಖಜಾನೆಯ ಬೀಗದ ಕೈ ಎಲ್ಲಿ ಹೋಗಿದೆ?"

"ನೋಡಿದೆಯಾ? ಇವನು ಇನ್ನೊಬ್ಬ ಬುದ್ಧಿವಂತ. ಅಯ್ಯೋ! ಆ ಬೀಗದ ಕೈ ತೊಲೆಯ ಮೇಲಿಟ್ಟು ಮರೆತಿದ್ದಾನೆ. ನನಗೆ ಕಣ್ಣು ಎಳೆದು ಕೊಂಡು ಹೋಗುತ್ತಿದೆ. ಬಿಡು ಅಲ್ಲಿಗೆ!"

"ಆಗಿ ಹೋಯಿತು. ಕೊನೆಯ ಮಾತು. ಆ ಧಾಂಡಿಗ ಏಕೆ ಜನ ರನ್ನು ಹೊರುತ್ತಿರುವುದು?"

"ಸರಿ. ಯಾರನ್ನಾದರೂ ನಡುಹೊಳೆಯಲ್ಲಿ ಎತ್ತಿ ಹಾಕಿದರೆ ಆಯಿತು ಅಲ್ಲಿಗೆ ಅವನ ಕಷ್ಟ ಮುಗಿಯಿತು. ಇನ್ನು ಸಾಧ್ಯವಿಲ್ಲ. ನನಗೆ ನಿದ್ದೆ." ಎಂದು ಗೃಧ್ರರಾಜನು ಮಲಗಿಬಿಟ್ಟನು. ಬ್ಯಾಂಡಿಗಿಂತ ಹೆಚ್ಚಾಗಿ ಗೊರಕೆ ಹೊಡೆಯಲು ಆರಂಭವಾಯಿತು. ಬೆಳಗಾಗುವವರೆಗೆ ಹಾಗೆ ಚೆನ್ನಾಗಿ ನಿದ್ದೆ ಮಾಡಿ ಬೆಳಗಾಗುತ್ತಲೂ ಎದ್ದು ತನ್ನ ಕೆಲಸಕ್ಕೆ ಹೊರಟು ಹೋದನು.

ಗೃಧ್ರರಾಜನ ಮಡದಿಯು ಹ್ಯಾನ್ಸನಿಗೆ ಗೃಧ್ರರಾಜನ ಉತ್ತರ ಗಳನ್ನೆಲ್ಲ ಮತ್ತೊಮ್ಮೆ ಹೇಳಿ ಗಟ್ಟಿಮಾಡಿಕೊಟ್ಟು ಬೀಳ್ಕೊಟ್ಟಳು.

ಹ್ಯಾನ್ಸನು ದಾರಿಯಲ್ಲಿ ಬರುತ್ತಾ ಹೊಳೆಯ ಬಳಿಗೆ ಬಂದನು. ಧಾಂಡಿಗನು "ಏನಪ್ಪಾ! ನನ್ನ ವಿಚಾರ ತಿಳಿದುಕೊಂಡು ಬಂದೆಯಾ?" ಎಂದನು. ಅವನ ಮೇಲೆ ಕುಳಿತು ಹೊಳೆಯನ್ನು ದಾಟಿ ಈಚೆಗೆ ಬಂದು "ನೀನು ಹೊತ್ತುಕೊಂಡು ಹೋಗುವವರಲ್ಲಿ ಯಾರನ್ನಾದರೂ ಹೊಳೆಯ ನಡುವೆ ಎತ್ತಿ ಹಾಕಿಬಿಡು. ಅಲ್ಲಿಗೆ ನಿನ್ನ ಈ ನಿಯೋಗವು ಮುಗಿಯು ವುದು" ಎಂದು ತನ್ನ ಪಾಡಿಗೆ ತಾನು ಮುಂದೆ ಬಂದನು.

ಮುಂದೆ ಪಾಳೆಯಗಾರನ ಅರಮನೆಯು ಸಿಕ್ಕಿತು. ಹ್ಯಾನ್ಸನು ಬಂದಾನೇ ಎಂದು ಪಾಳೆಯಗಾರನು ಅವನ ದಾರಿಯನ್ನೇ ನೋಡುತ್ತಿದ್ದನು. ಹ್ಯಾನ್ಸನು ಬಂದು ತೊಲೆಗಳನ್ನೆಲ್ಲಾ ಹುಡುಕಿ ಬೀಗದ ಕೈಯನ್ನು ತೆಗೆದು

ಕೊಟ್ಟನು. ಪಾಳೆಯಗಾರನು ಬಹಳ ಸಂತೋಷಪಟ್ಟು ಹ್ಯಾರ್ಸನಿಗೆ ಬೇಕಾದಷ್ಟು ಚಿನ್ನಬೆಳ್ಳಿಗಳನ್ನು ಕೊಟ್ಟು ಕಳುಹಿಸಿದನು.

ಅಲ್ಲಿಂದ ಮುಂದೆ ಬರುತ್ತಿರಲು ಇನ್ನೊಬ್ಬ ಪಾಳೆಯಗಾರನೂ ಹಾಗೆಯೇ ಇವನ ದಾರಿಯನ್ನು ಕಾದಿದ್ದನು. ಇವನು ಬಂದು ಆ ಹಕ್ಕಿಯ ಗೂಡನ್ನು ಹುಡುಕಿ ಅದರಲ್ಲಿದ್ದ ತಲೆಯ ಕೂದಲನ್ನು ತಂದುಕೊಡುತ್ತಲೂ ಅವನ ಮಗಳಿಗೆ ರೋಗವು ಗುಣವಾಯಿತು. ಅವನು ಹ್ಯಾರ್ಸನಿಗೆ ಬೇಕಾದಷ್ಟು ಉಪಚಾರಮಾಡಿ ತಾನೂ ಚಿನ್ನಬೆಳ್ಳಿಗಳನ್ನು ಬೇಕಾದಹಾಗೆ ಕೊಟ್ಟುಕಳುಹಿಸಿದನು.

ಹ್ಯಾರ್ಸನು ಇದೆಲ್ಲವನ್ನೂ ತೆಗೆದುಕೊಂಡು ತನ್ನ ಊರಿಗೆ ಬಂದನು. ಅವನು ಬರುವುದಕ್ಕಿಂತ ಮುಂಚೆ ಅವನ ಕೀರ್ತಿಯು ಅರಮನೆಗೆ ಬಂದು ಮುಟ್ಟಿತು. ಅರಸನು ಇನ್ನು ಬೇರೆ ಉಪಾಯ ಕಾಣದೆ ಮಗಳನ್ನು ಕೊಟ್ಟು ಮದುವೆಮಾಡಲು ಸಿದ್ಧನಾದನು.

ಮದುವೆಯು ಸಂಭ್ರಮವಾಗಿ ನಡೆಯಿತು. ಹ್ಯಾರ್ಸನೂ ಹೊಸ ಹೆಂಡತಿಯೊಡನೆ ಸುಖವಾಗಿದ್ದು ಕಾಲಕ್ರಮದಲ್ಲಿ ಅರಸನಾದನು.

---

## ಅದೃಷ್ಟ ಒಲಿದರೆ!

ಡೆನ್ಮಾರ್ಕಿನ ಒಂದು ಹಳ್ಳಿಯಲ್ಲಿ ಬಡರೈತನೊಬ್ಬನು ವಾಸವಾಗಿದ್ದನು. ಅವನ ಮನೆಯಲ್ಲಿ ಅವನ ಹೆಂಡಿತಿ, ಒಂದು ವರ್ಷದ ಮಗು ಬಿಟ್ಟು ಇನ್ನು ಯಾರೂ ಇರಲಿಲ್ಲ.

ಒಂದು ಸಲ ಚಳಿಗಾಲ ಬಂತು. ಚಳಿಗಾಲದಲ್ಲಿ ಅಲ್ಲಿ ಬಹಳ ಕಷ್ಟ. ಪುಣ್ಯವಂತರಾದವರು ಮನೆಯನ್ನು ಬಿಟ್ಟು ಹೊರಕ್ಕೆ ಕೂಡ ಹೊರಡುವುದಿಲ್ಲ. ಅಂತಹ ಕಾಲದಲ್ಲಿ ಈ ರೈತನಿಗೆ ಕೆಲಸ ಕಾರ್ಯ ಎಲ್ಲಿಂದ ಬರಬೇಕು?

ಕೆಲಸ ಕಾರ್ಯ ಮಾಡದಿದ್ದರೆ ಬಡವರಿಗೆ ಜೀವನವು ನಡೆಯುವುದು ಹೇಗೆ? ಅದರಿಂದ ಗಂಡ ಹೆಂಡಿರು ಇದ್ದ ಊರು ಮನೆಬಾಗಿಲು ಎಲ್ಲಾ ಬಿಟ್ಟು ಜೀವನವನ್ನು ಹುಡುಕಿಕೊಂಡು ಹೊರಟರು.

ದಾರಿಯಲ್ಲಿ ಒಂದು ದೊಡ್ಡ ಕಾಡು ಸಿಕ್ಕಿತು. ಇವರು ಅದನ್ನು ದಾಟುತ್ತಿರುವಾಗ ಹಿಮದ ಮಳೆಯು ಸುರಿಯಿತು. ಹಿಮದ ಮಳೆಯು ಮೊದಲಾದರೆ, ನೆಲವೆಲ್ಲ, ಆಕಾಶವೆಲ್ಲ, ಗಿಡಮರಗಳೆಲ್ಲ ಹಿಮಮಯವಾಗಿ ಬೆಳ್ಳಗೆ ಆಗಿಹೋಗಿ, ಎತ್ತಕಡೆ ಹೋಗಬೇಕು ಏನು ಮಾಡಬೇಕು ಏನೂ ತೋರದೆ ಹೋಗುತ್ತದೆ. ಹಾಗಾಗಿ ಗಂಡನೂ ಹೆಂಡತಿಯೂ ಬೇರೆಬೇರೆ ಯಾಗಿ ಹೋದರು. ಇಬ್ಬರೂ ಕೂಗಿದರೂ ಅವನು ಕೂಗಿದುದು ಇವಳಿಗೆ ಕೇಳಿಸದು, ಇವಳು ಕೂಗಿದುದು ಅವನಿಗೆ ಕೇಳಿಸದು. ಹೀಗೆ ಒಬ್ಬರೊಬ್ಬರು ಒಂದೊಂದು ದಾರಿಯನ್ನು ಹಿಡಿದರು

ಗಂಡನು ಕಾಡಿನಲ್ಲಿ ಅಲೆಯುತ್ತಿರುವಾಗ ಹೆಂಡತಿಯು ತಪ್ಪಿಸಿಕೊಂಡ ಗೋಳಿನ ಜೊತೆಗೆ ಹೊಟ್ಟೆಯ ಹಸಿವಿನ ಗೋಳೂ ಸೇರಿತು. ಎರಡು ತೆರನಾಗಿ ಗೋಳಿಡುವ ಗೌಡನು ಎತ್ತಕಡೆ ಹೋಗುವೆನು ಎಂಬುದನ್ನೂ ಗಮನಿಸಲಾರದೆ ಹೋದನು. ಇದರ ಜೊತೆಗೆ ಹಿಮ, ಹಿಮದ ಗಾಳಿ, ಹೀಗೆ ಸಂಕಟಪಡುತ್ತಿರುವಾಗ ಅವನಿಗೆ ದೂರದಲ್ಲಿ ಹೊಗೆ ಕಾಣಿಸಿತು. ಹೊಗೆಯು ಇರಬೇಕಾದರೆ ಯಾರೋ ಬೆಂಕಿಯನ್ನು ಉರಿಸುತ್ತ ಇರಬೇಕು ಎಂದುಕೊಂಡು ಅತ್ತಕಡೆ ಹೋದನು.

ಅಷ್ಟುದೂರ ಹೋದಮೇಲೆ ಒಂದು ಮನೆಯು ಸಿಕ್ಕಿತು. ಆ ಮನೆ ಯನ್ನು ನೋಡಿದರೆ ಏಕೋ ದಿಗಿಲಾಗುವಂತೆ ಇದ್ದರೂ ಗೌಡನು ಬೇಕಾ ದುದು ಆಗಲಿ ಎಂದು ಹೋಗಿ ಧೈರ್ಯವಾಗಿ ಬಾಗಿಲು ತಟ್ಟಿದನು. ಒಳಗ ನಿಂದ ಯಾರೋ ವಿಕಾರವಾದ ಧ್ವನಿಯಲ್ಲಿ "ಯಾರು?" ಎಂದರು. ಗೌಡನು, "ನಾನೊಬ್ಬ ಹಾದಿಹೋಕ. ಹಸಿದು ಬಂದಿದ್ದೇನೆ. ಒಂದು ತುತ್ತು ಅನ್ನ ನೀಡಿ ದೇವರೇ!" ಎಂದು ಕೇಳಿಕೊಂಡನು. ಒಳಗಿನಿಂದ "ನಿನಗೆ

ಬೇಕಾದ್ದು ನಾನು ಕೊಡುತ್ತೇನೆ. ನನಗೆ ಬೇಕಾದ್ದು ನೀನು ಕೊಡು ವೆಯಾ?" ಎಂದು ಕೇಳಿದರು. "ಮೊದಲು ತಿನ್ನಲು ಒಂದು ತುತ್ತು ಕೊಡಿ. ಆಮೇಲೆ ಬೇಕಾದುದು ಆಗಲಿ" ಎಂದನು ಗೌಡ.

ಬಾಗಿಲು ತೆರೆಯಿತು. ಮೊಳದುದ್ದ ಕುಳ್ಳನೊಬ್ಬನು ಬಂದು ಅವನನ್ನು ಕರೆದುಕೊಂಡು ಹೋಗಿ ತಿನ್ನುವುದಕ್ಕೆ ಬಿಸಿಬಿಸಿ ರೊಟ್ಟಿ, ಕುಡಿಯುವುದಕ್ಕೆ ಬಿಸಿಬಿಸಿ ಹಾಲು ಕೊಟ್ಟು ಒಳ್ಳೆಯ ಮಾತನಾಡಿದನು. ಗೌಡನ ಗೋಳನ್ನೆಲ್ಲ ಕೇಳಿ, "ಅಯ್ಯೋ! ಪಾಪ!" ಎಂದು ಮರುಗಿದನು.

ಕೊನೆಗೆ ಒಂದು ಹಣದ ಚೀಲ ತೆಗೆದು ಮುಂದಿಟ್ಟು "ನೋಡು. ಈ ಚೀಲದಲ್ಲಿ ಯಾವಾಗಲೂ ಹಣ ತೀರುವುದಿಲ್ಲ. ಇದು ಬೇಕೆ?" ಎಂದನು.

ಗೌಡನಿಗೆ ಕುರುಡನಿಗೆ ಕಣ್ಣು ಬಂದಂತಾಯಿತು; "ಪುಣ್ಯಾತ್ಮ! ನೀನಷ್ಟು ದೊಡ್ಡಮನಸ್ಸು ಮಾಡಿದರೆ ಬಡವ ಬದುಕಿಕೊಳ್ಳುತ್ತೇನೆ" ಎಂದನು.

"ಕೊಡುತ್ತೇನೆ. ಆದರೆ ಒಂದು ಕಟ್ಟು. ನೀನು ನಿನ್ನ ಮಗನನ್ನು ಕೊಡಬೇಕು."

ಗೌಡನಿಗೆ ಅದು ಒಪ್ಪಲಿಲ್ಲ. "ಆ! ಮಗನನ್ನು ಮಾರಿಕೊಳ್ಳಲೇ?" ಎಂದನು.

ಕುಳ್ಳನು "ಅದೇನೋ ನಿನ್ನ ಇಷ್ಟ! ಇಲ್ಲಿಗೆ ಬಂದು ನನ್ನ ರೊಟ್ಟಿ ಕಡಿದ ಮೇಲೆ ನನ್ನ ಋಣ ತಪ್ಪಿಸಿಕೊಳ್ಳುವ ಹಾಗಿಲ್ಲ. ಹದಿನಾಲ್ಕು ವರ್ಷ ತುಂಬುತ್ತಲೂ ನಿನ್ನ ಮಗನನ್ನಾದರೂ ಕಳುಹಿಸು. ಇಲ್ಲದಿದ್ದರೆ ನೀನಾದರೂ ಬಾ" ಎಂದು ಹೋಗಿ ಮಲಗಿಕೊಂಡನು.

ಗೌಡನಿಗೆ ನಿದ್ದೆ ಬರಲಿಲ್ಲ. ಕುಳ್ಳನು ಏಳುವುದರೊಳಗಾಗಿ ಎಲ್ಲಾದರೂ ತಲೆಮರೆಸಿಕೊಂಡು ಹೋಗೋಣ ಎಂದುಕೊಂಡು ನಡುರಾತ್ರಿಯಲ್ಲಿ ಚಳಿ ಗಾಳಿ ಕೂಡ ನೋಡದೆ ಅಲ್ಲಿಂದ ಓಡಿಹೋದನು.

ಇತ್ತ ಗೌಡನ ಹೆಂಡತಿಯು ಆ ಬೊಮಟೆಯನ್ನು ತಬ್ಬಿಕೊಂಡು

ಗೋಳೋ ಎಂದು ಅತ್ತುಕೊಂಡು ಕಾಡಿನಲ್ಲೆಲ್ಲ ಅಲೆದಳು. ಹಾಗೆ ಅಲೆಯುತ್ತಿರುವಾಗ ಅಲ್ಲೊಬ್ಬ ಕಿನ್ನರನು ಸಿಕ್ಕಿದನು. ಅವನು ಅಳುತ್ತ ಕುಳಿತಿದ್ದನು. ಆವನು ಇವಳನ್ನು "ಅಯ್ಯೋ! ನನ್ನಮ್ಮ! ನನ್ನ ಭಾಗದ ದೇವರು ಬಂದ ಹಾಗೆ ಬಂದೆಯಲ್ಲೆ ತಾಯಿ!" ಎಂದು ತನ್ನ ದುಃಖವನ್ನೆಲ್ಲ ಹೇಳಿಕೊಂಡನು. "ನನ್ನ ಹೆಂಡಿತಿಗೆ ಏನೋ ರೋಗ! ಹಾಸಿಗೆ ಬಿಟ್ಟು ಮೇಲಕ್ಕೆ ಏಳಲಾರದೆ ಬಿದ್ದುಕೊಂಡಿದ್ದಾಳೆ. ಅದಕ್ಕೆ ಏನು ಮಾಡಬೇಕೋ ನನಗೆ ತಿಳಿಯದು. ನೀವು ಮನುಷ್ಯರು. ನಿಮಗೆ ಸೊಪ್ಪುಸದೆ ಏನೇನೋ ಗೊತ್ತು. ಬಂದು ಏನಾದರೂ ಮಾಡಿ ನಮ್ಮನ್ನು ಕಾಪಾಡು" ಎಂದು ಕೇಳಿಕೊಂಡನು. ಗೌಡಿತಿಯು ಅವನ ಜೊತೆಯಲ್ಲಿ ಹೋದಳು.

ಅವನು ಗವಿಯ ಬಾಗಿಲಿಗೆ ಅಡ್ಡವಾಗಿಟ್ಟಿದ್ದ ಬಂಡೆಯನ್ನು ಉರುಳಿಸಿ ಬಾಗಲು ತೆಗೆದು ಅವಳನ್ನು ಕರೆದುಕೊಂಡು ಹೋದನು. ಅಲ್ಲಿ ಅವನ ಹೆಂಡಿತಿಗೆ ವಾಯು ಹಿಡಿದುಕೊಂಡಿತ್ತು.

ಗೌಡಿತಿಯು ಹೋಗಿ ಸೊಪ್ಪುಸದೆ ತಂದು ಕಷಾಯ ಮಾಡಿ ಕೊಟ್ಟಳು. ಕಿನ್ನರಿಗೆ ಹಿಡಿದಿದ್ದ ವಾಯುವು ಬಿಟ್ಟು ಅವಳು ಹಾಸಿಗೆ ಬಿಟ್ಟು ಎದ್ದಳು. ಗಂಡನಿಗೂ ಹೆಂಡಿತಿಗೂ ಬೇಕಾದಷ್ಟು ಸಂತೋಷವಾಯಿತು.

ಅವನು ಅವಳು ಮಾಡಿದ ಉಪಕಾರವನ್ನು ನೆನೆದುಕೊಂಡು "ನಾನೂ ನಿನಗೊಂದು ಉಪಕಾರವನ್ನು ಮಾಡುವೆನು" ಎಂದನು. ಗೌಡಿತಿಯು "ಈಗಲೀಗ ಚೆನ್ನಾಯಿತು. ನೀನು ನನಗೆ ನನ್ನ ಮಗನಿಗೆ ಊಟಕ್ಕಿಟ್ಟು ಉಪಚಾರ ಮಾಡಲಿಲ್ಲವೆ? ಇದಕ್ಕಿಂತ ಇನ್ನೇನು ಆಗಬೇಕು? ಇಷ್ಟರಮೇಲೆ ನಾನು ಮಾಡಿದ ಉಪಕಾರ ತಾನೇ ಏನು?" ಎಂದಳು.

ಕಿನ್ನರನು ಒಪ್ಪಲಿಲ್ಲ. ತನ್ನ ಪೆಟ್ಟಿಗೆಯಿಂದ ಒಂದು ಪೊಟ್ಟಣ ತೆಗೆದು ಕೊಟ್ಟು "ಇದರಲ್ಲಿ ಮೀನಿನ ಹುರುಪೊಂದು (scale), ಹಕ್ಕಿಯ ರೆಕ್ಕೆಯೊಂದು, ಕರಡಿಯ ಕೂದಲೊಂದು ಇವೆ. ಮೀನಿನ ಹುರುಪು ಹಿಸುಕಿದರೆ ಮೀನುಗಳ ಅರಸನು ಬರುವನು. ರೆಕ್ಕೆಯನ್ನು ತಿರುಚಿದರೆ ಹಕ್ಕಿಗಳ ಒಡೆ

ಯನು ಬರುವನು. ಕೂದಲನ್ನು ಸುತ್ತಿದರೆ ಕರಡಿಗಳ ಮುಖಂಡನು ಬರುವನು. ಅವರು ಬಂದು ಬೇಕಾದ ಕೆಲಸ ಮಾಡಿಕೊಡುವರು. ಇದನ್ನು ನಿನ್ನ ಮಗನಿಗಾಗಿ ಎತ್ತಿಟ್ಟಿರು' ಎಂದು ಹೇಳಿಕೊಟ್ಟನು.

ಗೌಡಿತಿಯು ಹಾಗೇ ಆಗಲಪ್ಪ ಎಂದು ಅದನ್ನು ತೆಗೆದುಕೊಂಡು ಸೆರಗಿನಲ್ಲಿ ಗಂಟು ಕಟ್ಟಿಕೊಂಡಳು. ಅವಳು ಹೊರಡುವಾಗ ಕಿನ್ನರನು "ಅಮ್ಮಾ ! ಇನ್ನೊಂದು ಹೇಳಬೇಕು. ನಿನ್ನ ಮಗ ನಿಮ್ಮ ಊರಿನ ಅರಸಾಗುತ್ತಾನೆ. ನಿಮಗೆ ಎಲ್ಲಾ ಒಳ್ಳೆಯದಾಗುತ್ತದೆ" ಎಂದು ಹೇಳಿ ಅವಳನ್ನು ಅವಳ ಮನೆಯ ದಾರಿಯವರೆಗೆ ಕರೆದುಕೊಂಡು ಬಿಟ್ಟು ತಾನು ಹಿಂದಿರುಗಿ ಹೋದನು.

ಇವಳು ಬರುವ ವೇಳೆಗೆ ಗಂಡನೂ ಮನೆಗೆ ಬಂದಿದ್ದನು. ಚಳಿಗಾಲವೂ ತೀರಿ ಅವನಿಗೆ ಅಲ್ಲಿ ಇಲ್ಲಿ ಕೆಲಸವು ಸಿಕ್ಕಿತ್ತು: ಅನ್ನಬಟ್ಟೆಗೆ ನೇರವಾಗಿತ್ತು. ಗಂಡಹೆಂಡಿರು ಒಬ್ಬರನ್ನೊಬ್ಬರು ಕಂಡೆವೆಂದು ಎಷ್ಟೋ ಆನಂದಪಟ್ಟರು. ಗೌಡನು ಮಗುವಿಗೆ ಸ್ವೆಂಡ್ ಎಂದು ಹೆಸರಿಟ್ಟನು. ಮಗನು ಬೆಳೆದ ಹಾಗೆಲ್ಲ ತಾಯ ಆನಂದವೂ ಬೆಳೆಯಿತು. ಅರಿತೋ ಮರೆತೋ ಆ ಮಗನನ್ನು ನೋಡುವ ಆನಂದದಲ್ಲಿ ಅವರಿವರೊಡನೆ ಅವಳು ತನ್ನ ಮಗನು ಆ ಊರಿನ ಅರಸನಾಗುವನೆಂದು ಹೇಳಿಕೊಂಡಳು. ಆ ಸುದ್ದಿಯು ಅಲ್ಲಿ ಬಿದ್ದು ಇಲ್ಲಿ ಬಿದ್ದು ದೊರೆಯವರೆಗೆ ಹೋಯಿತು. ಅವನಿಗೆ ಗಂಡುಮಕ್ಕಳು ಇರಲಿಲ್ಲ. ಮಗಳು ಮಾತ್ರ ಇದ್ದಳು.

ಅವನಿಗೆ ಆ ಸುದ್ದಿಯನ್ನು ಕೇಳಿ ಕೋಪ ಬಂತು. "ಗೌಡನ ಮಗನು ನನ್ನ ರಾಜ್ಯಕ್ಕೆ ಅರಸನಾಗುವುದೆ ?" ಎನ್ನಿಸಿತು. ಕೂಡಲೇ ಗೌಡನ ಬಳಿಗೆ ತನ್ನ ಆಳುಗಳನ್ನು ಕಳುಹಿಸಿದನು. ಅವರು "ನಿನ್ನ ಮಗನಮೇಲೆ ಅರಸರಿಗೆ ವಿಶ್ವಾಸ ಬಂದಿದೆ. ಅವನನ್ನು ಅರಮನೆಯಲ್ಲಿ ಇಟ್ಟುಕೊಳ್ಳುವ ಹಂತೆ. ಕರೆದುಕೊಂಡು ಬರಹೇಳಿದ್ದಾರೆ" ಎಂದು ಹೇಳಿ ಸ್ವೆಂಡನನ್ನು ಕರೆದುಕೊಂಡು ಹೋದರು.

ಅರಸನು ಆ ಹುಡುಗನನ್ನು ಒಂದು ಪೆಟ್ಟಿಗೆಯಲ್ಲಿ ಕೂಡಿ ಅದನ್ನು ಯಾರೂ ಅರಿಯದಂತೆ ಹೊಳೆಯಲ್ಲಿ ಹಾಕಿಸಿಬಿಟ್ಟನು.

ಆ ಪೆಟ್ಟಿಗೆಯು ಹೊಳೆಯಲ್ಲಿ ತೇಲಿಬರುತ್ತ ದಡದಲ್ಲಿ ಧಾನ್ಯ ಬೀಸುವು ದಕ್ಕೆ ಮಿಲ್ ಇಟ್ಟುಕೊಂಡಿದ್ದ ಒಬ್ಬನ ಕಣ್ಣಿಗೆ ಬಿತ್ತು. ಅವನು ಕಷ್ಟಪಟ್ಟು ಅದನ್ನು ದಡಕ್ಕೆ ಎಳೆಸಿದನು. ಅದರಲ್ಲಿ ಮೂರ್ಛೆ ಬಿದ್ದಿದ್ದ ಹುಡುಗನನ್ನು ಕಂಡು ದೇವರು ಮಕ್ಕಳಿಲ್ಲದ ತನಗೆ ಮಗನನ್ನು ಕೊಟ್ಟನು ಎಂದು ಅವ ನನ್ನು ವಿಶ್ವಾಸದಿಂದ ಕಾಪಾಡಿಕೊಂಡನು. ಸ್ವಿಂಡ್ಲನು ಬಂದುದೇ ಮೊದಲು ಆ ಮಿಲ್ಲರನಿಗೆ ಅದೃಷ್ಟವು ಒಲಿಯಿತು. ಅವನಿಗೆ ಐಶ್ವರ್ಯವು ಬಂದಿತು. ಹುಡುಗನು ಬರುಬರುತ್ತ ಬಲು ಚೆಲುವನಾಗಿ ಬೆಳೆದನು. ಅವನಿಗೆ ಹದಿನಾಲ್ಕ ನೆಯ ವರ್ಷವು ತುಂಬುವ ದಿನವೂ ಬಂದಿತು.

ಆ ದಿನಕ್ಕೆ ಸರಿಯಾಗಿ ಅಂತಃಪುರದಲ್ಲಿದ್ದ ಅರಸನ ಮಗಳು ಅದೃಶ್ಯ ಳಾದಳು. ಎಲ್ಲೆಲ್ಲಿಯೂ ಹಾಹಾಕಾರವು ಹುಟ್ಟಿತು. ಅರಸನಿಂದ ಆಳಿನ ವರೆಗೆ ಎಲ್ಲರೂ ಹುಡುಕಿದರು. ಯಾರುಯಾರು ಹುಡುಕಿದರೂ ಎಲ್ಲೆಲ್ಲಿ ಹುಡುಕಿದರೂ ಅರಸಿನ ಮಗಳು ಸಿಕ್ಕಲಿಲ್ಲ.

ಅರಸನು ತನಗೆ ತಕ್ಕ ಪ್ರಾಯಶ್ಚಿತ್ತವಾಯಿತೆಂದು ಬಲುವಾಗಿ ಅತ್ತುಕೊಂಡನು. ಕೊನೆಗೆ "ಯಾರಾದರೂ ನನ್ನ ಮಗಳನ್ನು ಕರೆದು ಕೊಂಡು ಬಂದರೆ ಅವರಿಗೇ ಅವಳನ್ನು ಕೊಟ್ಟು ಮದುವೆಮಾಡುತ್ತೇನೆ. ಅರ್ಧರಾಜ್ಯ ಕೊಡುತ್ತೇನೆ" ಎಂದು ತನ್ನ ರಾಜ್ಯದಲ್ಲೆಲ್ಲಾ ಡಂಗೂರ ಹೊಡೆಯಿಸಿದನು.

ಇತ್ತ ಆ ಕುಳ್ಳನು ಬಂದು "ಹದಿನಾಲ್ಕು ವರ್ಷವಾಯಿತು. ನಿನ್ನ ಮಗನನ್ನು ಕೊಡುತ್ತೀಯೊ? ನೀನೇ ಬರುತ್ತೀಯೊ?" ಎಂದು ಗೌಡನನ್ನು ಪೀಡಿಸಿದನು. ಯತ್ನವಿಲ್ಲದೆ ಗೌಡನೇ ಅವನ ಜೊತೆಯಲ್ಲಿ ಹೋದನು. ಗೌಡಿ ತಿಯು "ಮಗ ಅರಸಿನ ಪಾಲಾದ. ಗಂಡ ದೆವ್ವದ ಪಾಲಾದ ಅಯ್ಯೋ! ನನ್ನ ಹಣೇಬರೆಹವೇ!" ಎಂದುಅತ್ತುಕೊಂಡು ಹುಚ್ಚು ಹಿಡಿದಹಾಗೆಅಲೆದಳು.

ಒಂದು ದಿನ ಆ ಹುಚ್ಚಿ ಗೌಡಿತಿಯು ಅಕಸ್ಮಾತ್ತಾಗಿ ತನ್ನ ಮಗನಿರುವೆಡೆಗೇ ಬಂದಳು. ಹುಡುಗನು ಹೊರಗೆ ನಿಂತಿದ್ದನು. ತಾಯಿಯು ಮಗನನ್ನು ಗುರ್ತಿಸಿದಳು. ಮಗನೂ ತಾಯಿಯ ಗುರ್ತು ಹಿಡಿದನು.

ತಾಯಿಯು ತನಗೆ ಸಂಭವಿಸಿದ ವಿಪತ್ತನ್ನೆಲ್ಲ ಮಗನಿಗೆ ಹೇಳಿದಳು. ಮಗನು "ಅಮ್ಮಾ ! ನೀನು ಇಲ್ಲಿರು. ನಾನು ಹೋಗಿ ನಮ್ಮ ಅಪ್ಪನನ್ನು ಬಿಡಿಸಿಕೊಂಡು ಬರುತ್ತೇನೆ" ಎಂದು ಹೊರಟನು. ತಾಯಿಯು ಮೊದ ಮೊದಲು ಬೇಡಬೇಡ ಎಂದಳು. ಕೊನೆಗೆ ಒಪ್ಪಿ ತನಗೆ ಆ ಕಿನ್ನರನು ಕೊಟ್ಟಿದ್ದ ಪೊಟ್ಟಣವನ್ನೂ ಅದರಲ್ಲಿರುವ ಪದಾರ್ಥಗಳನ್ನು ಉಪಯೋಗಿಸುವ ರೀತಿಯನ್ನೂ ಹೇಳಿ ಕಳುಹಿಸಿಕೊಟ್ಟಳು.

ಸ್ವೆಂಡನು ತಂದೆಯನ್ನು ಹುಡುಕಿಕೊಂಡು ಹೊರಟನು. ದಾರಿಯಲ್ಲಿ ಸಿಕ್ಕಿದವರನ್ನೆಲ್ಲ "ಮೊಳುದ್ದ ಕುಳ್ಳ ಎಲ್ಲಿದ್ದಾನೆ ಬಲ್ಲಿರಾ?" ಎಂದು ಕೇಳುತ್ತಾ ಹೋದನು. ಕೊನೆಗೆ ಒಬ್ಬನು "ನೋಡು ನಮಗೆ ಯಾರಿಗೂ ತಿಳಿಯದು. ಕಡಲಿನಲ್ಲಿ ಇರುವ ಮೀನುಗಳ ಅರಸನ್ನು ಕೇಳು. ಅವನಿಗೇನಾದರೂ ಗೊತ್ತಿರಬಹುದು" ಎಂದನು. ಸ್ವೆಂಡನು ಆಗಲಿ ಎಂದು ಕಡಲಿನ ದಡಕ್ಕೆ ಹೋದನು. ಕಿನ್ನರನು ತನ್ನ ತಾಯಿ ಕೊಟ್ಟಿದ್ದ ಮೀನಿನ ಹುರುಪನ್ನು ಹಿಸುಕಿದನು. ಕಡಲಿನಲ್ಲಿ ಭಾರಿಯ ಗದ್ದಲವಾಯಿತು. ಅಲೆಗಳು ಒಂದೊಂದು ತೆಂಗಿನಮರದುದ್ದ ಎದ್ದು ಬಂದು ದಡಕ್ಕೆ ಅಪ್ಪಳಿಸಿದುವು. ಆ ತೆರೆಗಳ ನಡುವೆ ಮೀನರಾಜನು ಕಾಣಿಸಿಕೊಂಡು "ಯಾರು ನನ್ನನ್ನು ಕರೆದವರು?" ಎಂದನು.

ಸ್ವೆಂಡನು ಧೈರ್ಯವಾಗಿ ಮುಂದೆ ಹೋಗಿ ನಿಂತನು. "ನಾನೇ ನಿನ್ನನ್ನು ಕರೆದವನು. ನಮ್ಮ ತಂದೆಯನ್ನು ಹಿಡಿದುಕೊಂಡು ಹೋಗಿರುವ ಕುಳ್ಳನು ಎಲ್ಲಿರುವನೋ ಹೇಳು. ನಿನಗೆ ಗೊತ್ತಿದೆಯಂತೆ" ಎಂದನು. ಮೀನು "ನನಗೆ ಗೊತ್ತಿಲ್ಲ. ಅದು ಗೊತ್ತಿರುವುದು ಕಾಕರಾಜನಿಗೆ. ಅವನು ಸಮುದ್ರದ ಮಧ್ಯ ಇರುವ ದ್ವೀಪದಲ್ಲಿ ಇದ್ದಾನೆ. ಬೇಕಾದರೆ

ಬಾ. ನಾನು ಅಲ್ಲಿಗೆ ಕರೆದುಕೊಂಡು ಹೋಗುತ್ತೇನೆ. ಆದರೆ, ಅವನೇನಾದರೂ ನಿನ್ನನ್ನು ಕಂಡರೆ ಕುಕ್ಕಿ ಕುಕ್ಕಿ ಕೊಂದುಹಾಕುತ್ತಾನೆ. ನೋಡಿಕೋ; ಧೈರ್ಯವಿದ್ದರೆ ಬಾ" ಎಂದನು. ಹುಡುಗನು "ಆಗಲಿ. ನೋಡಿಕೊಳ್ಳೋಣ. ಕರೆದುಕೊಂಡು ಹೋಗು" ಎಂದನು. ವಿಮಾನು ಅವನನ್ನು ತನ್ನ ಬೆನ್ನಿನಮೇಲೆ ಕೂರಿಸಿಕೊಂಡು ಆ ದ್ವೀಪಕ್ಕೆ ಕರೆದುಕೊಂಡು ಹೋಯಿತು.

ಅಲ್ಲಿಗೆ ಹೋಗುವ ವೇಳೆಗೆ ಸಂಜೆಯಾಗಿತ್ತು. ಚಳಿಯಾಗುತ್ತಿತ್ತು. ಅಲ್ಲಿ ಇವನಿಗೆ ಕಂಬಳಿ ಗಿಂಬಳಿ ಕೊಡುವವರು ಯಾರು? ಆದರಿಂದ ಇವನು ಹೋಗಿ ಅಲ್ಲಿದ್ದ ತರಗೆಲ್ಲ ಗುಡ್ಡೆಮಾಡಿ ಅದರೊಳಗೆ ಸೇರಿಕೊಂಡನು. ರಾತ್ರಿ ಅದರಮೇಲೆ ಹಿಮಬಿದ್ದು ಒಂದು ಹಿಮದ ಗುಡ್ಡೆಯಹಾಗೆ ಕಾಣುತ್ತಿತ್ತು. ಬೆಳಗಿನಝಾವದಲ್ಲಿ ಕಾಗೆಗಳೆಲ್ಲ ಎದ್ದುವು. ಕಾಕರಾಜನೂ ಎದ್ದನು. ಅವನ ಮಕ್ಕಳು, "ಕಾಕಾ! ಕಾಕಾ! ಅಪ್ಪಾ! ಇವೊತ್ತು ಎಲ್ಲಿಯೋ ಹೋಗಬೇಕೆಂದು ಹೇಳಿದ್ದೆಯಲ್ಲ!" ಎಂದುವು. ಕಾಕರಾಜನು "ಹೌದು! ಹೌದು. ಮೊಳುದ್ದ ಕುಳ್ಳನು ಬರಹೇಳಿದ್ದಾನೆ. ಅವನು ಒಬ್ಬ ಮನುಷ್ಯನನ್ನು ಹಿಡಿದುಕೊಂಡು ಬಂದಿದ್ದಾನೆ. ಇವತ್ತು ಅವನನ್ನು ಕೊಂದು ತಿನ್ನುತ್ತಾನೆಯಂತೆ. ನನ್ನನ್ನೂ ಊಟಕ್ಕೆ ಬರಹೇಳಿದ್ದಾನೆ" ಎಂದನು. ಮರಿಗಳು "ಪಾಪ! ಆ ಮನುಷ್ಯನು ಬದುಕುವಹಾಗಿಲ್ಲ ಹಾಗಾದರೆ?" ಎಂದುವು. ಕಾಗೆಯೂ "ಇಲ್ಲವೇ ಇಲ್ಲ. ನಿಮಗೇಕೆ ಆ ಯೋಚನೆ?" ಎಂದಿತು.

ಆ ಮರಿಗಳಿಗೆ ಇನ್ನೂ ರೆಕ್ಕೆ ಬಂದಿರಲಿಲ್ಲ. ತಂದೆಯ ಕೈಯಲ್ಲಿ ಮಾತಾಡುವ ಅವಸರದಲ್ಲಿ ಒಂದು ಧೊಪ್ಪನೆ ಕೆಳಕ್ಕೆ ಬಿತ್ತು. ಸ್ವೆಂಡನು ಅವುಗಳು ಆಡುತ್ತಿದ್ದ ಮಾತೆಲ್ಲ ಕೇಳುತ್ತಿದ್ದನಾಗಿ ಅವನು ಆ ಕೆಳಕ್ಕೆ ಬಿದ್ದ ಮರಿಯನ್ನು ಹಾಗೆಯೇ ಹಿಡಿದುಕೊಂಡನು. ಆ ಹೊತ್ತಿನಲ್ಲಿ ಇನ್ನೂ ಬೆಳಕಾಗಿರಲಿಲ್ಲ. ಕತ್ತಲಿನಲ್ಲಿ ಕಾಗೆಗಳಿಗೆ ಕಣ್ಣು ಕಾಣಿಸದು. ಕಾಕರಾಜನಿಗೆ ಮರಿ ಬಿದ್ದುದು ತಿಳಿಯಿತು. ಆದರೆ ಕೆಳಕ್ಕೆ ಬಿದ್ದ ಮರಿಯನ್ನು ಎತ್ತಿಕೊಂಡು

ಬರಲಾರ. ಏನುಮಾಡಬೇಕು ಎಂದು ಯೋಚಿಸುತ್ತಿರುವುದರೊಳಗಾಗಿ ಕೆಳಗಿನಿಂದ ಮರಿಯು "ಯಾರೋ ನನ್ನನ್ನು ಹಿಡಿದುಕೊಂಡಿದ್ದಾರೆ" ಎಂದು ಕೂಗಿಕೊಂಡಿತು. ರಾಜನಿಗೆ ಗಾಬರಿಯಾಯಿತು. "ಯಾರು ಹಿಡಿದು ಕೊಂಡವರು? ಬಿಟ್ಟರೆ ಸರಿ! ಇಲ್ಲದಿದ್ದರೆ ಧ್ವಂಸಮಾಡಿಬಿಡುತ್ತೇನೆ" ಎಂದಿತು. ಸ್ವೆಂಡನು ನಕ್ಕು "ಹಿಡಿದುಕೊಂಡಿರುವವನು ನಾನು. ಮನುಷ್ಯ ರಾಜ. ಕುಳ್ಳನ ಹತ್ತಿರದಿಂದ ಗೌಡನನ್ನು ಕಾಪಾಡುವ ಉಪಾಯ ಹೇಳಿಕೊಡಬೇಕು. ರಾಜಪುತ್ರಿಯಿರುವ ಸ್ಥಳ ಹೇಳಬೇಕು. ಇಲ್ಲದಿದ್ದರೆ ಈಗಲೇ ನಿಮ್ಮನ್ನೆಲ್ಲ ನಾನು ಧ್ವಂಸಮಾಡುತ್ತೇನೆ" ಎಂದನು. ಕಾಕ ರಾಜನು ಯತ್ನವಿಲ್ಲದೆ ಹೇಳಿದನು: "ಕುಳ್ಳನು ಪಕ್ಷಿರಾಜನಿಗೆ ಮಾತ್ರ ಹೆದರುತ್ತಾನೆ. ಅವನನ್ನು ಕರೆದುಕೊಂಡು ಹೋದರೆ, ಅವನು ಗೌಡನನ್ನೂ ಬಿಡುತ್ತಾನೆ. ರಾಜಪುತ್ರಿಯಿರುವ ಸ್ಥಳವು ಅವನಿಗೂ ತಿಳಿಯದು. ನನಗೂ ತಿಳಿಯದು. ನೀನು ನನ್ನ ಮರಿಯನ್ನು ಬಿಡು ಮತ್ತೆ."

ಸ್ವೆಂಡನು "ನೀನು ನಿಜವನ್ನೇ ಹೇಳಿರುವೆನೆಂದು ಮೊದಲು ಪ್ರಮಾಣಮಾಡು, ಆಮೇಲೆ ಬಿಡುವೆನು." ಎಂದನು. ಕಾಗೆಯು ಯತ್ನ ವಿಲ್ಲದೆ ಅವನು ಹೇಳಿದಹಾಗೆ ಆಣೆಯಿಟ್ಟುಕೊಂಡಿತು. ಮರಿಗೆ ಬಿಡುಗಡೆ ಯಾಯಿತು.

ಹುಡುಗನು ಸೂರ್ಯನ ಉದಯವಾಗುತ್ತಿದ್ದ ಹಾಗೆಯೇ ಹಕ್ಕಿಯ ರೆಕ್ಕೆಯನ್ನು ತಿರುಚಿ ಹಕ್ಕಿಗಳ ಅರಸನನ್ನು ಬರಮಾಡಿಕೊಂಡನು. ಅವನು ಬರುವ ಆರ್ಭಟಕ್ಕೆ ಬಿರುಗಾಳಿ ಎದ್ದಿತು. ಮೋಡಗಳೆಲ್ಲ ಚೆಲ್ಲಾಪಿಲ್ಲಿಯಾಗಿ ಹೋದುವು. ದೊಡ್ಡ ಧೂಳು ಎದ್ದು ಆಕಾಶದವರೆಗೂ ಹಾರಿತು. ಆದರೂ ಹುಡುಗನು ಹೆದರದೆ ನಿಂತಿದ್ದನು. ಅವನೂ ಹುಡುಗನನ್ನು ಆದರದಿಂದ ಕಂಡು ಅವನಿಗೆ ಸಹಾಯಮಾಡುವುದಾಗಿ ಮಾತುಕೊಟ್ಟು ಅವನನ್ನು ಕುಳ್ಳನಿರುವೆಡೆಗೆ ಕರೆದುಕೊಂಡು ಹೋದನು.

ಕುಳ್ಳನು ತನಗೆ ಗೌಡನು ಗೊತ್ತೇಯಿಲ್ಲವೆಂದನು. ಹಕ್ಕಿಗಳ ಅರಸನು

"ನೋಡು, ಒಳ್ಳೆಯಮಾತಿನಲ್ಲಿ ಅವನನ್ನು ಬಿಟ್ಟುಕೊಟ್ಟರೆ ಸರಿ, ಇಲ್ಲವಾದರೆ, ನಿನ್ನನ್ನು ಕೊಕ್ಕಿನಲ್ಲಿ ಕಚ್ಚಿಕೊಂಡು ಎತ್ತಿಕೊಂಡು ಹೋಗಿ ಮೇಲಿನಿಂದ ಎಸೆದುಬಿಡುವೆನು. ಎಚ್ಚರಿಕೆ" ಎಂದು ಹೆದರಿಸಿದನು. ಆಗ ಯತ್ನವಿಲ್ಲದೆ ಕುಳ್ಳನು ತಾನು ನೆಲಮಾಳಿಗೆಯಲ್ಲಿಟ್ಟಿದ್ದ ಗೌಡನನ್ನು ಈಚೆಗೆ ಕರೆತಂದನು. ಗೌಡನು ಮಗನನ್ನು ಗುರುತು ಹಿಡಿದನು. ಅವನ ಸಂತೋಷಕ್ಕೆ ಪಾರವೇ ಇಲ್ಲವಾಯಿತು.

ಗೌಡನು ಮಗನ ಜೊತೆಯಲ್ಲಿ ಇನ್ನೇನು ಹೊರಡಬೇಕು. ಆಗ ಅವನಿಗೆ ಕುಳ್ಳನು ತನಗೆ ಕೊಡುವೆನೆಂದು ಹೇಳಿದ್ದ ಹಣದ ಚೀಲದ ನೆನಪಾಯಿತು. "ಸ್ವೆಂಡ! ಇವನ ಹತ್ತಿರ ಒಂದು ಹಣದ ಚೀಲವಿದೆ. ಅದರಲ್ಲಿ ಯಾವಾಗಲೂ ಹಣ ತೀರುವುದೇ ಇಲ್ಲ. ಎಷ್ಟು ತೆಗೆದುಕೊಂಡರೂ ತುಂಬಿಯೇ ಇರುತ್ತದೆ, ಅದನ್ನು ನನಗೆ ಕೊಡುವುದಾಗಿ ಹೇಳಿದ್ದ" ಎಂದನು. ಸ್ವೆಂಡನು ಕುಳ್ಳನನ್ನು ಕರೆದು "ನೀನು ಆ ಹಣದ ಚೀಲವನ್ನು ಕೊಡಬೇಕು" ಎಂದನು. ಕುಳ್ಳನಿಗೆ ಅದನ್ನು ಕೊಡುವುದಕ್ಕೆ ಬಹು ಸಂಕಟವಾಯಿತು. ಕೊಡದಿದ್ದರೆ ಯತ್ನವಿಲ್ಲ. ಕೊಡುವುದಕ್ಕೆ ಇಷ್ಟವಿಲ್ಲ. ಏನುಮಾಡಬೇಕು? ಅದರಿಂದ ಮಾತು ಮಾತನಾಡುತ್ತಲೇ, "ಇಗೋ ತೆಗೆದುಕೋ" ಎಂದು ಕೊಡುವವನ ಹಾಗೆ ಮುಂದೆ ಬಂದು ಅದನ್ನು ಕಡಲಿನೊಳಕ್ಕೆ ಎಸೆದು ತಾನು ಓಡಿಬಿಟ್ಟನು.

ಸ್ವೆಂಡನು ಮೀನರಾಜನನ್ನು ಬರಮಾಡಿಕೊಂಡು ಆ ಚೀಲವನ್ನು ತರಿಸಿ, ಅದನ್ನು ತಂದೆಗೆ ಕೊಟ್ಟು ಅವನನ್ನು ಕರೆದುಕೊಂಡು ಮನೆಗೆ ಬಂದನು.

ಹೀಗೆ ಗೌಡನ ಮಗನು ಭೂತಗಳು ಹಿಡಿದುಕೊಂಡು ಹೋಗಿದ್ದ ತನ್ನ ತಂದೆಯನ್ನು ಬಿಡಿಸಿಕೊಂಡು ಬಂದ ಸಾಹಸದ ಸುದ್ದಿಯು ಎಲ್ಲಾ ಕಡೆಗೂ ಹರಡಿತು. ಅರಸನಿಗೂ ತಿಳಿಯಿತು. ಅರಸನು ಸ್ವೆಂಡನಿಗೆ ಹೇಳಿ ಕಳುಹಿಸಿ ಬರಮಾಡಿಕೊಂಡನು. ಅವನೊಡನೆ ಮಾತನಾಡುವುದಕ್ಕೆ ಅರಸ

ನಿಗೆ ನಾಚಿಕೆಯಾಯಿತು. ಯತ್ನವಿಲ್ಲದೆ, ಅವನಿಗೆ ತಾನು ಹಿಂದೆ ಮಾಡಿದ್ದ ಅಪರಾಧವನ್ನು ಕುರಿತು ಹೇಳಿ, ತನ್ನನ್ನು ಮನ್ನಿಸಬೇಕೆಂದು ಕೇಳಿಕೊಂಡನು "ಹೇಗಾದರೂ ಮಾಡಿ ನನ್ನ ಮಗಳನ್ನು ಕರೆದುಕೊಂಡುಬಾ. ಈ ಕೆಲಸವನ್ನು ನೀನಲ್ಲದೆ ಇನ್ನು ಯಾರೂ ಮಾಡಲಾರರು. ನಾನು ಹಿಂದೆ ನಿನಗೆ ಮಾಡಿದ ಅಪರಾಧವನ್ನು ಮರೆತು ಈ ಕೆಲಸಕ್ಕೆ ಕೈಹಾಕು. ನಿಜವಾಗಿಯೂ ನಿನಗೇ ಅವಳನ್ನು ಕೊಟ್ಟು ಮದುವೆ ಮಾಡುವೆನು. ಈ ರಾಜ್ಯವನ್ನೆಲ್ಲ ನಿನಗೇ ಕೊಡುವೆನು" ಎಂದು ಬಹು ವಿಧವಾಗಿ ಹೇಳಿಕೊಂಡನು.

ಸ್ವೆಂಡನು ಕೊನೆಗೆ ಆಗಲಿ ಎಂದು ಒಪ್ಪಿಕೊಂಡು ಹೊರಟನು. ಹಿಂದೆಯೇ ಮೀನರಾಜನೂ ಪಕ್ಷಿರಾಜನೂ ತನಗೆ ಸಹಾಯಮಾಡಿದ್ದರು. ಅದರಿಂದ, ಈ ಸಲ ಕರಡಿಯ ಕೂದಲನ್ನು ಉಜ್ಜಿ ಕರಡಿಗಳ ಅರಸನನ್ನು ಬರಮಾಡಿಕೊಂಡನು. ಕೂದಲನ್ನು ಉಜ್ಜುತ್ತಿದ್ದಹಾಗೆಯೇ ಭೂಮಿಯು ಪಟ ಪಟ ಎಂದು ಬಾಯಿಬಿಟ್ಟಿತು. ನೂರು ಗುಂಡುಗಳು ಒಟ್ಟಿಗೆ ಹಾರಿಸಿದಷ್ಟು ಭಾರಿಯ ಶಬ್ದವಾಯಿತು. ಆ ಬಿರುಕಿನಿಂದ ಕರಡಿಯ ರಾಜನು ಮೇಲಕ್ಕೆ ಬಂದನು. ಅವನು ಹಕ್ಕಿಗಳ ರಾಜನಿಗಿಂತಲೂ ಆದರ ತೋರಿಸಿ, ಇವನನ್ನು ಹತ್ತಿರಕ್ಕೆ ಕರೆದು ತೊಡೆಯಮೇಲೆ ಕೂರಿಸಿಕೊಂಡು, "ಏನಪ್ಪಾ! ನನ್ನನ್ನು ಏಕೆ ಬರಮಾಡಿಕೊಂಡೆ? ನನ್ನಿಂದ ಏನು ಆಗಬೇಕು? ಹೆದರದೆ ಹೇಳು. ನಾನು ಅಗತ್ಯವಾಗಿ ಮಾಡಿಕೊಡುತ್ತೇನೆ" ಎಂದನು.

ಸ್ವೆಂಡನು ಅರಸನ ಮಗಳ ವಿಚಾರವನ್ನು ಕರಡಿಗಳ ದೊರೆಗೆ ಹೇಳಿದನು. ಅವನು ಅಷ್ಟು ಹೊತ್ತು ದೀರ್ಘವಾಗಿ ಯೋಚಿಸಿ, "ನೋಡು, ಅವಳನ್ನು ನಿಮ್ಮ ಕುಳ್ಳನ ಅಣ್ಣ ಪೆಡಂಭೂತನು ಹೊತ್ತುಕೊಂಡು ಹೋಗಿರುವನು. ಅವನೊಡನೆ ಯುದ್ಧಮಾಡಿದ ಹೊರತು ಅವನು ಬಿಡುವುದಿಲ್ಲ. ಇರಲಿ. ಬಾ. ಅವನು ಉತ್ತರ ಸಮುದ್ರದಲ್ಲಿ ಇರುವ ಒಂದು ದ್ವೀಪದಲ್ಲಿ ಇರುವನು. ನಾನು ಉತ್ತರ ಸಮುದ್ರದವರೆಗೂ ಕರೆದುಕೊಂಡು ಹೋಗುತ್ತೇನೆ. ಅಲ್ಲಿ ಹಕ್ಕಿಗಳ ಅರಸನನ್ನು ಬರಮಾಡಿಕೊ. ಅವನ ಸಹಾಯದಿಂದ ನಾನೂ

ನೀನೂ ಇಬ್ಬರೂ ಅವನ ದ್ವೀಪಕ್ಕೆ ಹೋಗೋಣ. ನಾನು ಅವನೊಡನೆ ಯುದ್ಧಮಾಡುವೆನು. ಅವನು ಯುದ್ಧದಲ್ಲಿ ಸೋತರೆ, ತನ್ನ ಜುಟ್ಟನ್ನು ಕಿತ್ತು ಎಸೆಯುವನು. ಆ ಜುಟ್ಟು ನೆಲಕ್ಕೆ ಬೀಳುವುದರೊಳಗಾಗಿ ನೀನು ಅದನ್ನು ಹಿಡಿದುಕೊಂಡು ಸುಟ್ಟುಬಿಟ್ಟರೆ ಅವನು ಸಾಯುವನು. ಹಾಗೆ ಮಾಡಿ ಅವನು ಸೆರೆಯಲ್ಲಿಟ್ಟಿರುವ ಆ ದೊರೆಯ ಮಗಳನ್ನು ಕರೆದುಕೊಂಡು ಬರೋಣ'' ಎಂದು ಹೇಳಿದನು. ಅದರಂತೆ ಇಬ್ಬರೂ ಉತ್ತರ ಸಮುದ್ರಕ್ಕೆ ಹೊರಟರು.

ಇವರು ಬರುವ ಸುದ್ದಿಯನ್ನು ಆ ಪೆಡಂಭೂತನು ಹೇಗೋ ತಿಳಿದು ಕೊಂಡುಬಿಟ್ಟನು. ತಾನಿರುವ ದ್ವೀಪದ ಸುತ್ತಲೂ ಉರಿಯನ್ನು ಉಗುಳುವ ಹಾವುಗಳನ್ನು ತಂದು ಕಾವಲಿಟ್ಟನು. ಕರಡಿಯ ಅರಸನೂ ಸ್ನೇಹಿತನೂ ಪಕ್ಷಿರಾಜನ ಮೇಲೇರಿ ಆ ದ್ವೀಪಕ್ಕೆ ಹೋಗಿ ಅಲ್ಲಿ ಇಳಿಯಬೇಕೆಂದರೆ, ಅಲ್ಲಿದ್ದ ಉರಿಯ ಹಾವುಗಳು ಬುಸ್ಸು ಎನ್ನುವುವು. ಕೂಡಲೆ ಕಾಡುಕಿಚ್ಚಿ ನಂತಹ ಭಾರಿಯ ಉರಿಯು ಎದ್ದುಬಿಡುವುದು. ಆ ಉರಿಯ ರಭಸವನ್ನು ತಾಳಲಾರದೆ ಪಕ್ಷಿರಾಜನು ಹಿಂದಿರುಗುವನು. ಹೀಗೇ ಎರಡುಮೂರು ದಿನವಾಯಿತು.

ಕೊನೆಗೆ ಇದಕ್ಕೆ ಏನಾದರೂ ಉಪಾಯ ಮಾಡಲೇಬೇಕು ಎಂದು ಕರಡಿಗಳ ಅರಸನೂ ಪಕ್ಷಿರಾಜನೂ ಮಾತನಾಡಿಕೊಂಡರು. ಅದಕ್ಕೇನು ಮಾಡಬೇಕೆಂದು ಮಂಜಿನ ಬೆಟ್ಟದಮೇಲಿದ್ದ ಮಂತ್ರವಾದಿಗೆ ಒಬ್ಬನಿಗೆ ಗೊತ್ತು ಎಂದು ತಿಳಿಯಿತು. ಅದರಿಂದ ಮೀನುಗಳ ರಾಜನನ್ನು ಬರಮಾಡಿ ಕೊಂಡು ಅವನಿಂದ ಉತ್ತಮವಾದ ರತ್ನಗಳನ್ನು ತರಿಸಿಕೊಂಡು ಕರಡಿಗಳ ಅರಸನು ಸ್ನೇಹಿತನನ್ನು ಕರೆದುಕೊಂಡು ಹೋದನು. ಮಂತ್ರವಾದಿಯು ಆ ಉತ್ತಮರತ್ನಗಳನ್ನು ನೋಡಿ ಬಲು ಮೆಚ್ಚಿಕೊಂಡು ಅವರಿಗೆ ಆ ಹಾವು ಗಳನ್ನು ಗೆಲ್ಲುವ ಉಪಾಯವನ್ನು ಹೇಳಿಕೊಟ್ಟನು. ''ಆ ಹಾವುಗಳು ದಿನಕ್ಕೊಂದು ಸಲ ಮಾತ್ರ ಹಾಗೆ ಉರಿಯನ್ನು ಉಗುಳಬಲ್ಲವು. ಅದರಿಂದ

ಮೊದಲನೆಯ ಸಲ ನೀವು ಹೋದಾಗ ಉಗುಳಿದ ಉರಿಯು ಆರುವವರೆಗೂ ಸುಮ್ಮನಿದ್ದು ಮತ್ತೆ ನೀವು ಹೋದರೆ, ಆ ಹಾವುಗಳು ಏನೂ ಮಾಡ ಲಾರದೆ ಸುಮ್ಮನಾಗುವುವು. ನೀವು ಆ ಪೆಡಂಭೂತವನ್ನು ಒಂದೇ ದಿನದಲ್ಲಿ ಗೆಲ್ಲಬೇಕು. ಇಲ್ಲವಾದರೆ ಎರಡನೆಯ ದಿನ ಆ ಹಾವುಗಳು ಬೆಳ ಗಾಗುತ್ತಲೂ ಉರಿಯನ್ನು ಉಗಿದು ನಿಮ್ಮನ್ನು ತೀರಿಸಿಬಿಡುವುವು ' ಎಂದು ಹೇಳಿಕೊಟ್ಟನು.

ಕರಡಿಯ ಅರಸನೂ ಹಕ್ಕಿಗಳ ದೊರೆಯೂ ಸ್ವೆಂಡನನ್ನು ಕರೆದು ಕೊಂಡು ಹೊರಟರು. ಮೊದಲನೆಯ ಸಲ ಇವರು ಆ ದ್ವೀಪದ ಹತ್ತಿರಕ್ಕೆ ಹೋಗುತ್ತಿದ್ದ ಹಾಗೆಯೇ ಎಂದಿನಂತೆ ಆ ಹಾವುಗಳು ಮೋಡಗಳನ್ನು ಮುಟ್ಟುವಂತಹ ಉರಿಗಳನ್ನು ಉಗಿದುವು. ಅವು ಆರಿ ಶಾಂತವಾಗುವ ವರೆಗೂ ಕೊಂಚ ದೂರದಲ್ಲಿದ್ದು ಮತ್ತೆ ಅಲ್ಲಿಗೆ ಹೋಗಲು ಅವು ಏನೂ ಮಾಡಲಾರದೆ ಇವರನ್ನು ಕಂಡು ಓಡಿದವು. ಕೂಡಲೇ ಪಕ್ಷಿರಾಜನು ತನ್ನವರನ್ನೆಲ್ಲ ಒರಮಾಡಿಕೊಂಡು, "ಈ ಹಾವುಗಳು ಕೆಟ್ಟಜಂತುಗಳು. ಇವು ಇರಬಾರದು. ಇವನ್ನು ಹೊತ್ತುಕೊಂಡು ಹೋಗಿ. ತಿಂದು ಹಾಕಿ ಬಿಡಿ " ಎಂದನು. ಅಲ್ಲಿಗೆ ಆ ದ್ವೀಪದಲ್ಲಿ ಹಾವುಗಳ ಬಾಧೆಯು ಮುಗಿಯಿತು.

ಇವರು ಮೂವರೂ ಪೆಡಂಭೂತನನ್ನು ಹುಡುಕಿದರು. ಅವನು ಹಾವುಗಳು ಸೋತುದನ್ನು ಕಂಡು, ಇವರು ಯಾರೋ ಪ್ರಬಲರು ಬಂದಿ ರುವರೆಂದು ತಿಳಿದುಕೊಂಡು, ರಾಜಪುತ್ರಿಯನ್ನು ನೆಲಮಾಳಿಗೆಯಲ್ಲಿ ಭದ್ರ ವಾಗಿಟ್ಟು ತಾನು ಈಚೆಗೆ ಬಂದನು. ಕರಡಿಗಳ ಅರಸನು ಅವನನ್ನು ಕಾಣು ತ್ತಲೂ ಮೇಲೆ ಬಿದ್ದನು. ಇಬ್ಬರಿಗೂ ಭಾರಿಯ ಕದನವಾಯಿತು.

ಬೆಳಗಿಂದ ಸಂಜೆಯವರೆಗೂ ಹೋರಾಟವಾಯಿತು. ಪೆಡಂಭೂತನು ತನ್ನ ಮಾಯಾ ಯುದ್ಧವನ್ನೆಲ್ಲ ಮಾಡಿದನು. ಒಂದು ಸಲ ಹಕ್ಕಿಯಾಗಿ ಎರಗುವುದು ; ಹಾವಾಗಿ ಮೇಲೆ ಬೀಳುವುದು ; ಮೃಗವಾಗಿ ತಿವಿಯಲೂ ಕಚ್ಚಲೂ ಬರುವುದು ; ಹೀಗೆ ಎಷ್ಟೋ ವಿಧವಾಗಿ ಏನೇನೂ ಆಟವಾಡಿ

ದರೂ ಕರಡಿಗಳರಸನು ಅವನನ್ನು ಬಿಡಲಿಲ್ಲ. "ಪಾಪಿ! ಎಷ್ಟೋ ಜನರನ್ನು ಕಾರಣವಿಲ್ಲದೆ ಹಿಂಸಿಸಿ ಕೊಂದಿದ್ದೀಯೆ. ನೀನು ಇದ್ದರೆ ಇನ್ನೂ ಎಷ್ಟು ಜನಕ್ಕೆ ಹಿಂಸೆ ಕೊಡುವೆಯೋ ? ನಿನಗೆ ಕೊನೆಗಾಲ ಬಂತು ಎಂದು ತಿಳಿ" ಎಂದು ಹೇಳಿ ಅವನು ಯಾವ ರೂಪದಲ್ಲಿ ಬಂದರೂ ಹಿಡಿದು ಹೊಡೆಯುತ್ತಾ ಬಂದನು.

ಕೊನೆಗೆ ಅವನು ಒಂದು ಕೋಳಿಯ ರೂಪದಲ್ಲಿ ಬಂದನು. ಕೋಳಿಯೆಂದರೇನು ? ಸಾಮಾನ್ಯದ ಕೋಳಿಯೇ ? ಒಂದು ಆನೆಯ ಗಾತ್ರವಿದೆ. ಆ ಕೋಳಿಯು ಕರಡಿಯನ್ನು ಬಲುವಾಗಿ ಗೋಳು ಹುಯ್ದುಕೊಂಡಿತು. ಕೊನೆಗೆ ತಾನು ಉಳಿಯುವುದು ಅಸಾಧ್ಯವಾಗುತ್ತಲೂ ಅದರ ಜುಟ್ಟು ಹಾರಿಬಿತ್ತು. ಕೂಡಲೇ ಸ್ವೆಂಡನು ಅದನ್ನು ಹಿಡಿದು ಅದನ್ನು ಬೆಂಕಿಯಲ್ಲಿ ಹಾಕಿ ಸುಟ್ಟುಬಿಟ್ಟನು. ಪೆಡಂಭೂತನ ಆಟವು ಮುಗಿಯಿತು.

ರಾಜಪುತ್ರಿಯಿರುವ ಸ್ಥಳವನ್ನು ಹುಡುಕುವುದಕ್ಕೆ ಅಷ್ಟು ಹೊತ್ತಾಯಿತು. ಅಂತೂ ಕಷ್ಟಪಟ್ಟು ಅವಳಿರುವ ಸ್ಥಳವನ್ನು ಗೊತ್ತುಮಾಡಿ ಅವಳನ್ನು ಕರೆದುಕೊಂಡು ಮರುದಿನದ ಬೆಳಕು ಹರಿಯುವುದರೊಳಗಾಗಿ ಆ ಸ್ಥಳವನ್ನು ಬಿಟ್ಟು ಹೊರಟುಬಂದರು.

ಸ್ವೆಂಡನು ತನಗೆ ಸಹಾಯಮಾಡಿದ ಮಿತ್ರರನ್ನೆಲ್ಲ ವಂದಿಸಿ ಬೀಳ್ಕೊಟ್ಟನು. "ನಿಮ್ಮಿಂದ ಆದ ಉಪಕಾರವನ್ನು ಎಷ್ಟೆಂದು ಹೇಳಲಿ ?" ಎಂದು ಹೊಗಳಿದನು. ಅದಕ್ಕೆ ಅವರು, "ಅಯ್ಯಾ ! ನಿಮ್ಮ ತಾಯಿಯು ಬದುಕಿಸಿ ಕೊಟ್ಟ ಕಿನ್ನರಿಯು ನಮ್ಮ ತಂಗಿ. ಆ ತಂಗಿಯೆಂದರೆ ನಮಗೆ ಪಂಚಪ್ರಾಣ. ಅದರಿಂದ ನಮ್ಮ ತಂಗಿಯ ಪ್ರಾಣವನ್ನು ಉಳಿಸಿಕೊಟ್ಟವಳ ಮಗನೆಂದು ನಿನ್ನ ಮೇಲೆ ನಮಗೆ ಇಷ್ಟು ವಿಶ್ವಾಸ. ಮತ್ತೆ ಸಮಯಬಿದ್ದರೆ ನಮ್ಮನ್ನು ಕರೆ. ನಾವು ಬಂದು ಎಂತಹ ಕಾರ್ಯವಿದ್ದರೂ ಮಾಡಿಕೊಡುವೆವು" ಎಂದು ಮಾತು ಕೊಟ್ಟು ತಮ್ಮ ತಮ್ಮ ಸ್ಥಾನಗಳಿಗೆ ಹೋದರು.

ಇತ್ತ ಅರಸನಿಗೆ ಅವನ ಮಗಳನ್ನು ಒಪ್ಪಿಸಿಯಾಯಿತು. ಮಗಳು

ಬಂದಮೇಲೆ ಅರಸನಿಗೆ ಮತ್ತೆ "ಗೌಡನ ಮಗನಿಗೆ ತನ್ನ ಮಗಳನ್ನು ಕೊಡುವುದೇ ?" ಎಂದು ದುರ್ಬುದ್ಧಿಯು ಬಂತು. ಆದರೆ ಮಗಳು ತಂದೆಗೆ ಸ್ವೆಂಡನ ಸ್ನೇಹಿತರ ಸಮಾಚಾರವನ್ನು ಹೇಳುತ್ತಲೂ ಅರಸನು ಬಾಯಿ ಮುಚ್ಚಿಕೊಂಡು ಅವನಿಗೆ ತನ್ನ ಮಗಳನ್ನು ಕೊಟ್ಟು ಮದುವೆಮಾಡಿದನು.

ಮದುವೆಯು ಸಂಭ್ರಮವಾಗಿ ನಡೆಯಿತು. ಅಲ್ಲಿ ಒಂದು ವಿಶೇಷ ಎಂದರೆ ವರನ ಕಡೆಯ ಬೀಗರೌತಣವು ಮೂರುದಿನ ನಡೆಯಿತು. ಒಂದು ದಿನ ಕಡಲಿನಲ್ಲಿರುವ ಮೀನುಗಳಿಗಾಗಿ, ಇನ್ನೊಂದು ದಿನ ಕಾಡಿನ ಕರಡಿಗಳಿಗಾಗಿ, ಮೂರನೆಯ ದಿನ ಆಕಾಶದ ಹಕ್ಕಿಗಳಿಗಾಗಿ.

ಕಾಲಕ್ರಮದಲ್ಲಿ ಸ್ವೆಂಡನು ಅರಸಾದನು. ಅವನೂ ಅವನ ಹೆಂಡತಿಯೂ ರಾಜ್ಯವಾಳುತ್ತಿದ್ದಾಗ, ಅವರಿಗೆ ಬೇಕಾದ ಹಣವನ್ನೆಲ್ಲ ಆ ಕುಳ್ಳನ ಚೀಲವೇ ಕೊಡುತ್ತಿತ್ತು. ಅದರಿಂದ ರಾಜ್ಯದಲ್ಲಿ ಅವರಿರುವವರೆಗೂ ಯಾರೂ ಕಾಳಿ ಕಂದಾಯ ಕೊಡಬೇಕಾಗಿರಲಿಲ್ಲ. ಎಲ್ಲೆಲ್ಲೂ ಸೌಖ್ಯವು ತುಂಬಿ ತುಳುಕಾಡುತ್ತಿತ್ತು.

---

## ಮೋಸವಾಯಿತು

ಒಬ್ಬ ಶ್ರೀಮಂತನು ಒಂದು ದಿನ ಹಬ್ಬಮಾಡಿ ತನಗೆ ಬೇಕಾದವರನ್ನೆಲ್ಲ ಊಟಕ್ಕೆ ಕರೆದಿದ್ದನು. ಬಂದ ಅತಿಥಿಗಳೆಲ್ಲರೂ ಊಟ ಉಪಚಾರಗಳಾದ ಮೇಲೆ ಕುಳಿತು ಸುಖವಾಗಿ ಮಾತನಾಡುತ್ತಿದ್ದರು. ಆ ಮಾತು ಈ ಮಾತು ಆಡುತ್ತ, ನರಿಗಳು ಜನಗಳಿಗೆ ಮೋಸಮಾಡುವ ವಿಚಾರವು ಬಂತು.

ಆ ಊರಿನಲ್ಲಿ ಒಬ್ಬ ಬಡಗಿ. ಇನ್ನು ಮೈಲೇ ಪಂಚವೀಸೇ ಎಂದರೆ ಮೊದಲ ಇಪ್ಪತ್ತೈದು ವರ್ಷ ಮಾತ್ರ ಕಳೆದಿದ್ದವನು. ಅವನು ಕೇಳುವವರೆಗೂ ಕೇಳಿ, "ಸಾಕುಸಾಕು ಸುಮ್ಮನಿರಿ. ನರಿಗಳಂತೆ, ಮನುಷ್ಯರಿಗೆ ಮೋಸ ಮಾಡುವುವಂತೆ! ಯಾರಾದರೂ ನಿಮ್ಮ ಮಾತು ನಂಬುತ್ತಾರೇನು?

ಏನೋ ಅಜ್ಜಿಕಥೆಗಳು" ಎಂದು ಹಾಸ್ಯಮಾಡಿದನು. ಅವನ ಹಾಸ್ಯವು ಇತರರಿಗೆ ರುಚಿಸಲಿಲ್ಲ. ಅವರಲ್ಲೊಬ್ಬನು "ಪಾಪ! ಪಾಪ! ನಿನಗೆ ಏನು ಗೊತ್ತು ಆ ವಿಷಯ! ಈ ನರಿಗಳು ಎಷ್ಟು ಲಕ್ಷ ಜನಕ್ಕೆ ಟೋಪಿ ಹಾಕಿವೆಯೋ! ಅಲ್ಲದೆ ಇರಲಿ. ಇಲ್ಲಿ ಈ ಹಳ್ಳದಲ್ಲಿ ಏನಿಲ್ಲವೆಂದರೂ ಇಪ್ಪತ್ತು ಮೂವತ್ತು ಜನರು ಮೋಸಹೋಗಿದ್ದಾರೆ" ಎಂದನು.

ಬಡಗಿಗೂ ಕೋಪಬಂತು. "ನಾನು ಇವೊತ್ತು ಅಲ್ಲಿಗೆ ಹೋಗಿ ಬರುತ್ತೇನೆ. ನೋಡೋಣ, ನಿಮ್ಮ ನರಿಗಳು ಏನು ಮಾಡುತ್ತವೆಯೋ! ಏನೋ ಮಹಾ!" ಎಂದನು.

ಇನ್ನೊಬ್ಬನು "ನೀನು ಅಲ್ಲಿಗೆ ಹೋಗಿ ಏನೂ ಇಲ್ಲದೆ ಕ್ಷೇಮವಾಗಿ ಬಂದರೆ, ನಾವೆಲ್ಲ ಸೇರಿ ನಿನಗೆ ಒಂದು ಸಾವಿರ ತಾಮ್ರದ ನಾಣ್ಯ ಕೊಡುತ್ತೇವೆ. ಇಲ್ಲದೆ ನೀನು ಪೆಚ್ಚುಬಿದ್ದು ಬಂದರೆ ನೀನು ನಮಗೆ ಒಂದು ಸಾವಿರ ತಾಮ್ರ ನಾಣ್ಯ ಕೊಡಬೇಕು" ಎಂದನು. ಎಲ್ಲರೂ ಒಪ್ಪಿದರು. ಬಡಗಿಯೂ ಒಪ್ಪಿದನು.

ಸಂಜೆಯಾಯಿತು. ಕತ್ತಲಾಗುತಿದ್ದ ಹಾಗೆಯೇ ಬಡಗಿಯು ಹಳ್ಳಕ್ಕೆ ಹೊರಟನು. ಹಳ್ಳದ ಹತ್ತಿರ ಹೋಗುತ್ತಿದ್ದ ಹಾಗೆಯೇ ಒಂದು ನರಿ ಒಂದು ಬಿದಿರು ಮೆಳೆಯೊಳಕ್ಕೆ ಚಿಗಿಯಿತು. ಅದನ್ನು ಕಂಡು "ಈ ನರಿಗಳು ಏನಾದರೂ ಆಟ ಕಟ್ಟಿದರೂ ಕಟ್ಟಿರಬಹುದು" ಎನ್ನಿಸಿತು. ಹಾಗೆಂದುಕೊಂಡು ಮೈಯೆಲ್ಲ ಕಣ್ಣುಮಾಡಿಕೊಂಡು ಸುತ್ತಮುತ್ತ ನೋಡುತ್ತ ಮುಂದೆ ಮುಂದೆ ಹೋಗುತ್ತಿದ್ದ ಹಾಗೆಯೇ ಒಂದು ಹೆಣ್ಣು ಕಣ್ಣಿಗೆ ಬಿತ್ತು. ಅವಳು ಆಚೆಯ ಹಳ್ಳಿಯ ಪಟೇಲನ ಹೆಂಡತಿ. ಮಗ್ಗುಲ ಗ್ರಾಮದ ಪಟೇಲನ ಮಗಳು.

ಆ ಹೆಂಗಸು ತಾನಾಗಿ ಬಡಗಿಯನ್ನು ಮಾತನಾಡಿಸಿದಳು. "ಇದೇನು! ಇತ್ತಕಡೆ ಹೊರಟಿರುವರಲ್ಲ?" ಎಂದಳು.

ಇವನು "ಇಲ್ಲೇ ಒಂದು ಹಳ್ಳಿಗೆ ಹೋಗಿ ಬರಬೇಕು" ಎಂದನು.

ಅದಕ್ಕವಳು "ಹೇಗಿದ್ದರೂ ನೀವು ನಮ್ಮ ಊರನ್ನು ಹಾದೇ

ಹೋಗಬೇಕು. ದೊಡ್ಡ ಮನಸ್ಸುಮಾಡಿ ನನ್ನನ್ನು ನಮ್ಮ ತಂದೆಯ ಮನೆಯಲ್ಲಿ ಬಿಟ್ಟುಹೋಗುವಿರಾ ? " ಎಂದಳು.

ಆ ಹೆಂಗುಸು ಹಾಗೆ ಕೇಳಿದುದು ಅವನಿಗೆ ಏಕೋ ಚೋದ್ಯವಾಗಿ ತೋರಿತು. ಬಹುಶಃ ಇದೆಲ್ಲ ನರಿಗಳ ಮಾಯೆಯಿರಬಹುದು ಎಂದೂ ಎನ್ನಿಸಿತು. ಆಗಲಿ ಇದಕ್ಕೆ ತಕ್ಕುದು ಮಾಡಬೇಕು ಎಂದುಕೊಂಡು, "ಆಗಲಮ್ಮಾ! ಅದಕ್ಕೇನು? ನಾನೂ ನಿನ್ನನ್ನು ನೋಡಿ ಬಹಳ ದಿನವಾಯಿತು. ಬಾ, ಕರೆದುಕೊಂಡು ಹೋಗಿ ನಿಮ್ಮ ಮನೆಯಲ್ಲಿ ನಿನ್ನನ್ನು ಬಿಟ್ಟು ನಾನು ಹೋಗುವೆನು " ಎಂದನು.

ಹಾಗೆಂದು ಹೇಳಿ ಅವಳನ್ನು ಮುಂದೆ ಬಿಟ್ಟುಕೊಂಡು ಇವನು ಹೋದನು. ಇವನ ಯೋಚನೆಯೇನು ? " ಇದೂ ಒಂದು ನರಿ. ನರಿ ತನ್ನ ಬಾಲವನ್ನು ಮುಚ್ಚಿಟ್ಟುಕೊಳ್ಳಲಾರದು. ಇದರ ಬಾಲ ಕಣ್ಣಿಗೆ ಬಿತ್ತು ಎಂದರೆ ಬಡಿದುಹಾಕಿಬಿಡುವೃದು " ಎಂದು. ಆದರೆ ಎಷ್ಟೆಷ್ಟು ನೋಡಿದರೂ ಬಾಲ ಕಣ್ಣಿಗೆ ಬೀಳಲೇ ಒಲ್ಲದು. ಕೊನೆಗೆ ಊರು ಸಿಕ್ಕಿತು.

ಈ ಹೆಣ್ಣು ಕಣ್ಣಿಗೆ ಬೀಳುತ್ತಲೇ ಮನೆಯವರೆಲ್ಲ ಓಡೋಡಿ ಬಂದರು. "ಎಲೆ ಎಲೇ! ಏನೇ? ಸುದ್ದೀಕೂಡ ಕೊಡದೆ ಬಂದುಬಿಟ್ಟಿದ್ದೀಯೆ! ಎಲ್ಲರೂ ಚೆನ್ನಾಗಿದ್ದಾರೆ ತಾನೇ? ಏನೂ ವಿಶೇಷವಿಲ್ಲ ತಾನೇ?" ಎಂದು ಏನೇನೋ ಮಾತನಾಡಿದರು.

ಬಡಗಿಗೆ ಮೈಯೆಲ್ಲ ಉರಿಯಿತು. "ನೋಡಿದೆಯಾ! ಈ ನರಿ ಎಂಥಾ ಆಟ ಕಟ್ಟಿದೆ. ಪಾಪ! ನಮ್ಮ ಪಟೇಲನ ಮನೆಯವರೆಲ್ಲ ಮೋಸಹೋದರಲ್ಲ" ಎಂದುಕೊಂಡು, ಯಾರಿಗೂ ತಿಳಿಯದ ಹಾಗೆ ಪಟೇಲನನ್ನು ಒಂದುಕಡೆ ಕರೆದುಕೊಂಡು ಹೋಗಿ "ಪಟೇಲರೇ! ಪಟೇಲರೇ! ಮೋಸಹೋದಿರಿ. ಈಗ ಬಂದಿರುವವಳು ನಿಮ್ಮ ಮಗಳಲ್ಲ. ನಿಮ್ಮ ಮಗಳ ವೇಷ ಹಾಕಿಕೊಂಡು ಬಂದಿರುವ ನರಿ. ನಾನು ಹಳ್ಳಿಗೆ ಹೊರಟಿದ್ದೆ. ದಾರಿಯಲ್ಲಿ ಬಿದಿರುಹಿಂಡಿನ ಹತ್ತಿರ ಒಂದು ನರಿ ಸುಳಿಯಿತು. ಅದೇ ಈ ಹೆಣ್ಣಾಗಿ

ಬಂದಿದೆ. 'ನಾನೂ ಅಲ್ಲಿಗೆ ಬರಬೇಕು. ಕರೆದುಕೊಂಡು ಹೋಗು' ಎಂದಿತು. ನಾನೂ, ಇರಲಿ ಎಂದು ಕರೆದುಕೊಂಡು ಬಂದೆ. ಮೋಸ ಹೋದೀರಿ! ಎಚ್ಚರಿಕೆ!" ಎಂದನು.

ಈ ಸುದ್ದಿ ಕೇಳಿ ಪಟೇಲನು, ಪಾಪ! ಮಂಕಾಗಿ ಹೋದನು. ಏನು ಮಾಡಬೇಕೋ ತಿಳಿಯದೆ ಒಂದು ಗಳಿಗೆ ಸುಮ್ಮನಿದ್ದು, ತನ್ನ ಹೆಂಡತಿಯನ್ನು ಕರೆದು ಬಡಗಿಯು ಹೇಳಿದುದನ್ನೆಲ್ಲ ಹೇಳಿದನು. ಅವಳು ರೇಗಿಕೊಂಡು, "ಆಹಾಹಾ! ಇದೀಗ ಸರಿಯಾಯಿತು. ಇವನಿಗೇನು ಬುದ್ಧಿಗಿದ್ದಿ ಚೆನ್ನಾಗಿದೆಯೋ ಇಲ್ಲವೊ! ನಮ್ಮ ಮಗಳು ನಮ್ಮ ಮನೆಗೆ ಬಂದಿದ್ದರೆ ಸರಿಯಂತೆ ಗಿರಿಯಂತೆ! ಎದ್ದುಹೋಗು ಅನ್ನಿ" ಎಂದುಬಿಟ್ಟಳು. ಇವನು "ನೀವು ಬೇಕಾದ್ದು ಹೇಳಿಯಮ್ಮ ಇದು ನಿಜವಾಗಿಯೂ ಮೋಸ!" ಎಂದು ಖಂಡಿತವಾಗಿ ಹೇಳಿದನು.

ಇವನು ಪಟ್ಟು ಹಿಡಿದುದನ್ನು ನೋಡಿ ಅವರಿಬ್ಬರೂ ಪೆಚ್ಚಾಗಿ ಹೋದರು. ಕೊನೆಗೆ, "ಹಾಗಾದರೆ ಈಗ ಏನು ಮಾಡಬೇಕು ಎನ್ನುತ್ತೀರಿ?" ಎಂದು ಕೇಳಿದರು.

ಸಮಯ ಕಾಯುತ್ತಿದ್ದ ಬಡಗಿಯು "ಅದನ್ನು ನನಗೆ ಬಿಡಿ. ನೀವು ಮನಸ್ಸು ಗಟ್ಟಿಮಾಡಿ ಒಂದು ಗಳಿಗೆ ಅತ್ತಕಡೆ ಇರಿ. ನೋಡುವಿರಂತೆ! ಚರ್ಮ ಸುಲಿದು, ಆ ನರೀ ಆಟವೆಲ್ಲ ಮೂಟೆ ಕಟ್ಟಿಸುತ್ತೇನೆ" ಎಂದನು. ಅವರೂ ಒಪ್ಪಿದರು.

ಅವನು ಹೋಗಿ ಕೋಣೆಯಲ್ಲಿ ಕುಳಿತು ಮಾತನಾಡುತ್ತಿದ್ದ ಆ ಹೆಂಗುಸನ್ನು ಕತ್ತಿನ ಮೇಲೆ ಕೈಹಾಕಿ ಒಲೆಯಮೇಲೆ ನೂಕಿದನು. ಅವಳು "ಅಯ್ಯೋ! ಅಯ್ಯೋ! ಅಪ್ಪಾ! ಅಮ್ಮಾ!" ಎಂದು ಕೂಗಿಕೊಂಡಳು. ಇವನು "ಯಾರ ಹತ್ತಿರ ಈ ಆಟವೆಲ್ಲ! ನೀನು ಬಿದಿರಮೆಳೆ ಹತ್ತಿರ ಕಣ್ಣಿಗೆ ಬಿದ್ದಾಗಲೇ ನನಗೆ ತಿಳಿದುಹೋಯಿತು." ಎಂದು ಅವಳ ಕೈಹಿಡಿದು ಹಿಂದಕ್ಕೆ ಕಟ್ಟಿ ಕೆಳಗೆ ಹಾಕಿ ತುಳಿದು ಹೊಡೆದು "ತೋರಿಸು ನಿನ್ನ ನಿಜರೂಪ!"

ಎಂದು ಪಚೀತಿಮಾಡಿದನು. ಅವಳು ಪಾಪ! ಅಯ್ಯೋ ಅಪ್ಪಾ ಅಮ್ಮ ಎಂದು ಅರಚಿಕೊಂಡು ಅತ್ತುಕೊಂಡು ಒದ್ದಾಡಿದಳು. ಅವಳು ಅತ್ತಹಾಗೆಲ್ಲ ಇವನೂ ಆರ್ಭಟಿಸುತ್ತಾ "ತೋರಿಸು ನಿನ್ನ ನಿಜರೂಪ! ಇಲ್ಲದಿದ್ದರೆ ನೋಡು ಸುಟ್ಟುಬಿಡುತ್ತೇನೆ" ಎಂದು ಹೇಳುತ್ತ ಅದೆಷ್ಟು ಹೊತ್ತಾದರೂ ನರಿಯಾಗದೇ ಹೋಗಲು ಉರಿಯುತ್ತಿದ್ದ ಕೊಳ್ಳಿಯನ್ನು ತೆಗೆದು ಅವಳನ್ನು ಸೀದನು. ಅವಳು "ಅಯ್ಯೋ! ಅಯ್ಯೋ! ತಡೆಯಲಾರೆ! ಉರಿ ತಡೆಯ ಲಾರೆ!" ಎಂದು ಕೆಳಗೆಬಿದ್ದು ಪ್ರಾಣಬಿಟ್ಟಳು.

ಮಗಳು ಸತ್ತುದನ್ನು ಕಂಡು ತಾಯಿತಂದೆಗಳು ಎದೆಯೊಡೆದು ಬಡಿದು ಕೊಂಡು ಅತ್ತರು. ತಾಯಿಯು ಬಡಗಿಯನ್ನು ಬಾಯಿಗೆ ಬಂದಂತೆ ಬಯ್ದಳು. ತಂದೆಯು ಹೊಡೆ ಹೊಡೆಯುವುದಕ್ಕೆ ಹೋದನು. ಆಳುಗಳು ಬಂದು ತಡೆದು "ಬೇಡಿ! ಬೇಡಿ. ಇವನನ್ನು ಈ ಕಂಬಕ್ಕೆ ಬಿಗಿದು ಸರಕಾರಕ್ಕೆ ತಿಳಿಸೋಣ. ಅವರು ವಿಚಾರಮಾಡಿ ಗಲ್ಲಿಗೆ ಹಾಕುತ್ತಾರೆ. ಇವನನ್ನು ನಾವೇಕೆ ಕೊಲ್ಲುವುದು?" ಎಂದು, ಹಾಗೇ ಮಾಡಿದರು.

ಸರಕಾರಕ್ಕೆ ತಿಳಿಸಲು ಇನ್ನೇನು ಆಳು ಹೋಗಬೇಕು. ಆ ವೇಳೆಗೆ ಸರಿಯಾಗಿ ಒಬ್ಬ ಭಿಕ್ಷು, ಒಬ್ಬ ಶಿಷ್ಯ, ಇಬ್ಬರನ್ನೂ ಒಬ್ಬ ಆಳು ಕರೆದು ಕೊಂಡು ಅಲ್ಲಿಗೆ ಬಂದನು.

ಭಿಕ್ಷುವು "ಯಜಮಾನರು ಮನೆಯಲ್ಲಿದ್ದಾರೆಯೋ?" ಎಂದು ಬರು ತ್ತಿದ್ದ ಹಾಗೆಯೇ ಎಲ್ಲರೂ ಆಳುವನ್ನು ನಿಲ್ಲಿಸಿಬಿಟ್ಟರು. ಹುಡುಗಿಯ ತಂದೆಯು "ದಯಮಾಡಿಸಬೇಕು" ಎಂದು ಭಿಕ್ಷುಗಳನ್ನು ಒಳಕ್ಕೆ ಕರೆದು ಕೊಂಡು ಬಂದನು. ಆತನು "ನಾನು ಪಕ್ಕದ ಹಳ್ಳಿಗೆ ಹೋಗಿದ್ದು ಬಂದೆ. ಹಾಗೆಯೇ ನಿಮ್ಮನ್ನು ನೋಡಿಕೊಂಡು ಹೋಗೋಣವೆಂದು ಬಂದೆ" ಎಂದನು.

ಪಟೇಲನು "ಏನೋ ತಾವು ದೇವರಹಾಗೆ ದಯಮಾಡಿಸಿದಿರಿ. ತಮಗೆ ಏನಾದರೂ ಉಪಚಾರ ಮಾಡೋಣ ಎಂದರೆ ಈ ದಿನ ನಮ್ಮಲ್ಲಿ

ಹೀಗೆ ಆಗಿದೆ.'' ಎಂದು ತಮ್ಮೆದುರಿಗೇ ತಮ್ಮ ಮಗಳ ಜೀವ ತೆಗೆದ ಕಥೆಯನ್ನು ಹೇಳಿ, ಇವನೇ ಇಷ್ಟು ಮಾಡಿದವನು ಎಂದು ಬಡಗಿಯನ್ನು ತೋರಿಸಿದರು.

ಭಿಕ್ಷುವು ''ಛೀ! ಛೀ! ಎಂತಹ ಅನ್ಯಾಯವಾಯಿತು. ಇಷ್ಟು ಮಾಡಿದವನು ಇವನೇ! ನಮ್ಮ ಪಕ್ಕದ ಗ್ರಾಮದ ಬಡಗಿಯಲ್ಲವೇ ಇವನು? ಇದು ಏಕೆ ಹೀಗೆಮಾಡಿದ?'' ಎಂದು ವಿಚಾರಿಸಿದನು.

ಬಡಗಿಯು ಕಲ್ಲೂ ಮರ ಕರಗುವಂತೆ ಗೋಳಾಡುತ್ತಾ ''ಅಯ್ಯೋ! ನಾನು ಏನು ಹೇಳಲಿ? ಶುದ್ಧವಾಗಿ ಮೋಸಹೋದೆ! ಏನಾದರೂ ಮಾಡಿ ನನ್ನನ್ನು ಬದುಕಿಸಿ'' ಎಂದು ಬೇಡಿಕೊಂಡನು.

ಭಿಕ್ಷುವು ಕಥೆಯನ್ನೆಲ್ಲ ಕೇಳಿ ''ಎಲೆಲಾ! ಹೀಗೆ ಮಾಡಬಹುದೆ? ಒಬ್ಬ ಹೆಂಗುಸಿನ ಪ್ರಾಣ ತೆಗೆದುಬಿಟ್ಟೆಯಲ್ಲ! ಹೋಗಲಿ. ನಾನು ಇವರಿಗೆಲ್ಲ ಹೇಳಿ ನಿನ್ನನ್ನು ಬಿಡಿಸಿದರೆ ನೀನು ನನ್ನ ಶಿಷ್ಯನಾಗಿ ಭಿಕ್ಷುವಾಗುತ್ತೀಯಾ?'' ಎಂದನು.

ಬಡಗಿಗೆ ಹೋಗಿದ್ದ ಪ್ರಾಣ ಬಂದಹಾಗಾಗಿ, ''ಅಗತ್ಯವಾಗಿ ಆಗಲಿ. ಅಂತೂ ನನ್ನ ಪ್ರಾಣ ಉಳಿಸಿ'' ಎಂದು ಭಿಕ್ಷುವಾಗಲು ಮಾತುಕೊಟ್ಟನು.

ಭಿಕ್ಷುವು ಇವನಿಂದ ಮಾತು ತೆಗೆದುಕೊಂಡು ಮನೆಯ ಯಜಮಾನನನ್ನು ಕರೆದು, ''ಇನ್ನೇಕೆ ಇಲ್ಲದ ಗದ್ದಲ ಮಾಡುವುದು? ಇವನು ಪಾಪ! 'ತಿಳಿಯದೆ ಹೀಗೆ ಮಾಡಿಬಿಟ್ಟೆ' ಎಂದು ಅತ್ತುಕೊಳ್ಳುತ್ತಿದ್ದಾನೆ. ಸತ್ತು ಹೋದ ನಿಮ್ಮ ಮಗಳು ಇವನನ್ನು ಗಲ್ಲಿಗೆ ಹಾಕಿದರೆ ಏನಾದರೂ ಹಿಂದಿರುಗಿ ಬರುತ್ತಾಳೆಯೇ? ಏನೋ ನಿಮಗೆ ಉಪಕಾರ ಮಾಡೋಣ ಎಂದು ಹೋಗಿ ಹೀಗೆ ಅನರ್ಥ ಮಾಡಿಬಿಟ್ಟಿದ್ದಾನೆ. ಹೋಗಲಿ ಬಿಡಿ. ಎಲ್ಲದಕ್ಕಿಂತ ಹೆಚ್ಚಾಗಿ ಈಗ ಪ್ರಾಣ ಉಳಿಸಿದರೆ ನನ್ನ ಶಿಷ್ಯನಾಗಿ ನಮ್ಮ ಮಠಕ್ಕೆ ಸೇರುವುದಾಗಿ ಮಾತು ಕೊಟ್ಟಿದ್ದಾನೆ'' ಎಂದು ಹೇಳಿದನು.

ಪಟೇಲನೂ ಅವನ ಹೆಂಡತಿಯೂ ಮಾತನಾಡಿಕೊಂಡು ''ಸ್ವಾಮಿ

ಗಳು ಹೇಳಿದುದು ನಿಜ. ಹೋದ ನಮ್ಮ ಮಗಳಂತೂ ಹೋದೇ ಹೋದಳು. ಹೋಗಲಿ, ಇವನೂ ಭಿಕ್ಷುವಾಗುವನಂತೆ! ಅದಾದರೂ ಆಗಲಿ." ಎಂದು ಕೊಂಡು "ಸ್ವಾಮೀ! ಇವನು ಈಗಲೇ ನಮ್ಮೆದುರಿಗೇ ತಲೆಬೋಳಿಸಿ ಕೊಂಡು ಭಿಕ್ಷುವಾಗಬೇಕು. ಹಾಗಾದರೆ ನಾವು ಸುಮ್ಮನಾಗುತ್ತೇವೆ" ಎಂದರು.

ಭಿಕ್ಷುವು ಬಡಗಿಯ ಮುಖವನ್ನು ನೋಡಿದನು. ಬಡಗಿಯು ಜೀವ ಉಳಿಯಿತಲ್ಲ ಎಂದು ಆಗಬಹುದು ಎಂದನು. ಮನೆಯವರು ಅವನ ಕಟ್ಟು ಗಳನ್ನು ಬಿಚ್ಚಿದರು. ಭಿಕ್ಷುವೂ ಅವನ ಶಿಷ್ಯನೂ ಸೇರಿಕೊಂಡು ಬಡಗಿಯ ತಲೆಯನ್ನು ನುಣ್ಣಗೆ ಮಾಡಿದರು. ಬಡಗಿಯೂ ಕೈಮುಗಿದುಕೊಂಡು ಕುಳಿತುಕೊಂಡು ತಲೆಮಾಡಿಸಿಕೊಂಡನು.

ಇಷ್ಟೆಲ್ಲ ಆಗುವುದರೊಳಗಾಗಿ ಬೆಳಗಾಯಿತು. ಇವನು ಭಿಕ್ಷುವಿಗೆ ದೀರ್ಘದಂಡ ನಮಸ್ಕಾರ ಮಾಡಿದನು. ಇವನು ಭೂಮಿಗೆ ಮೊಕವಿಟ್ಟು ಮಲಗಿದನೋ ಇಲ್ಲವೋ ಘೊಳ್ಳೆಂದು ನಕ್ಕ ಸದ್ದು ಕೇಳಿಸಿತು. ಥಟ್ಟನೆ ತಲೆಯೆತ್ತಿ ನೋಡಿದನು. ಯಾರೂ ಇಲ್ಲ. ತಾನೊಬ್ಬನೇ ಒಬ್ಬನು. ಇದ್ದುದು ಹಳ್ಳದ ಹತ್ತಿರ.

ಬಡಗಿಯು ತಾನು ಏನಾದರೂ ಕನಸು ಕಂಡೆನೋ ಎಂದು ಕಣ್ಣು ಉಜ್ಜಿಕೊಂಡನು. ತಲೆಯನ್ನು ಮುಟ್ಟಿ ನೋಡಿಕೊಂಡನು. ನುಣ್ಣಗಾಗಿತ್ತು. ಎಲ್ಲ ಅರ್ಥವಾಯಿತು. ಮರುಮಾತನಾಡದೆ ಎದ್ದು ತಲೆಗೆ ಒಂದು ಚೌಕ ವನ್ನು ಕಟ್ಟಿಕೊಂಡು ಮನೆಗೆ ಬಂದನು.

ಅಂದಿನ ಸಂಜೆಗೆ ಮತ್ತೆ ಶ್ರೀಮಂತನ ಮನೆಯಲ್ಲಿ ಎಲ್ಲರೂ ಸೇರಿದರು. ಬಡಗಿಯೂ ಬಂದನು. ಎಲ್ಲರೂ ಅವನನ್ನು ನೋಡಿ ಬಿದ್ದುಬಿದ್ದು ಹೊರಳಿ ಹೊರಳಿ ನಕ್ಕರು. ಚಾಚೂ ತಪ್ಪದೆ ಅವನು ತನ್ನ ಕಥೆಯನ್ನೆಲ್ಲ ಹೇಳಿದನು. ನೋಡಿಯೇ ನಕ್ಕವರು, ಆ ಕಥೆಯನ್ನು ಕೇಳಿದಮೇಲೆ ಇನ್ನು ಹೇಳಬೇಕೆ?

ಬಡಗಿಯೂ ಮಾತಿನಂತೆ ನಡೆದುಕೊಂಡನು. ಅವರಿಗೆ ಸಾವಿರ

ತಾಮ್ರದ ನಾಣ್ಯ ಕೊಟ್ಟನು. ಅವರು ಅಲ್ಲಿಯೇ ಆ ಹಣವನ್ನೆಲ್ಲ ಖರ್ಚು ಮಾಡಿ ದೊಡ್ಡ ಹಬ್ಬ ಮಾಡಿದರು.

---

## ಅಂಜಿಸಿದವರು ಯಾರು?

ಷುಮೆಯು ಚೆನ್ನಾಗಿ ಓದಿದವನು. ಅಲ್ಲದೆ ದೇಹಬಲವನ್ನು ಚೆನ್ನಾಗಿ ಕಾಪಾಡಿಕೊಂಡಿದ್ದವನು. ಅವನಿಗೆ ದೇಶಸಂಚಾರಮಾಡಿ ಬರಬೇಕು ಎನ್ನಿಸಿತು. ಒಂದು ದ್ವೀಪದಲ್ಲಿ ಅವನಿದ್ದುದು. ಅದರ ಸುತ್ತಲೂ ಕಡಲು. ಪಡುವಲಕಡಲ ತೀರದಲ್ಲಿ ಇವನು ವಾಸವಾಗಿದ್ದುದು. ಪೂರ್ವತೀರದ ವರೆಗೂ ಹೋಗಿ ಬರುವುದು ಎಂದು ಹೊರಟನು.

ಕೊಂಚದೂರ ಹೋಗುತ್ತಿದ್ದ ಹಾಗೆಯೇ ದೇಶಸಂಚಾರಕ್ಕೆ ಹೊರಟಿರುವ ಒಬ್ಬ ಯಾತ್ರಿಕ ಭಿಕ್ಷುವು ಸಿಕ್ಕಿದನು. ಇಬ್ಬರೂ ಒಂದೇ ಊರಿಗೆ ಹೋಗುವವರು ಎಂದಾದಮೇಲೆ, ಇಬ್ಬರೂ ಒಟ್ಟಿಗೇ ಹೋಗುವುದು ಎಂದುಕೊಂಡು ಹೊರಟರು. ಬರುಬರುತ್ತಾ ಇಬ್ಬರಿಗೂ ಸ್ನೇಹವು ಒಲಿಯಿತು. ಒಬ್ಬನು ಇನ್ನೊಬ್ಬರ ಕಷ್ಟಸುಖಗಳನ್ನೂ ಗೃಹಕೃತ್ಯಗಳನ್ನೂ ವಿಚಾರಿಸುವಷ್ಟೂ ಆಯಿತು. ಭಿಕ್ಷುವು ತನ್ನ ಕಷ್ಟಸುಖಗಳನ್ನು ಹೇಳಿಕೊಂಡನು; ಅವನ ಆಶೆ ಕೊಂಚ ಹಿರಿದು ಅದರಲ್ಲಿ ಸ್ವಾರ್ಥವೂ ಇಲ್ಲ; "ನೋಡು ಷುಮೆ! ನನಗೆ ಇದು ಬಹಳ ದಿನದ ಆಶೆ. ಒಂದು ಭಾರಿಯ ಕಂಚಿನ ಬುದ್ಧನ ವಿಗ್ರಹಮಾಡಿಸಿ, ಅದನ್ನು ಎಲ್ಲಾದರೂ ಪ್ರತಿಷ್ಠೆಮಾಡಬೇಕು. ಇದಕ್ಕೋಸ್ಕರವೇ ಮನೆ ಬಾಗಿಲು ಎಲ್ಲಾ ಬಿಟ್ಟು, ಭಿಕ್ಷಕ್ಕಾಗಿ ಊರೂರು ಅಲೆಯುತ್ತಿದ್ದೇನೆ. ಎಷ್ಟು ಕಷ್ಟ ಎನ್ನುತ್ತೀಯೆ? ಇದುವರೆಗೂ ಇನ್ನೂರು ಬೆಳ್ಳಿಯ ನಾಣ್ಯ ಸಿಕ್ಕಿದೆ ಅಷ್ಟೆ! ಆ ಗುರು ಗೌತಮಬುದ್ಧ ಯಾವೊತ್ತಿಗೆ ನನ್ನ ಆಸೆ ನೆರವೇರಿಸಿಕೊಟ್ಟು ನನ್ನನ್ನು ಕೃತಾರ್ಥನನ್ನು

ಮಾಡುತ್ತಾನೆಯೋ? ಏನಾದರೂ ಆಗಲಿ ಒಳ್ಳೆ ಹಾಲುಗಂಬಿನಲ್ಲಿ ಸೊಗಸಾಗಿ ಅಷ್ಟು ಎತ್ತರದ ಒಂದು ವಿಗ್ರಹಮಾಡಿಸಿಬಿಡಬೇಕು'' ಎಂದನು.

ಷುವೆಗೆ ಇನ್ನೂರು ಬೆಳ್ಳಿಯ ನಾಣ್ಯ ಎನ್ನುತ್ತಲೂ ಕಿವಿ ನೆಟ್ಟಗಾಯಿತು. ಹಣ ಎನ್ನುವುದೇನು ವಿಷವಲ್ಲವೆ? ಸರಿ. ಹೇಗಾದರೂ ಮಾಡಿ ಅದನ್ನು ಹಾರಿಸಿಬಿಡಬೇಕು ಎನ್ನಿಸಿತು. ಏನೇನೊ ಯೋಚಿಸಿದನು: "ಮಾನವನ ಬಾಳು ಬಸಿರಿಗೆ ಬಂದುದೇ ಮೊದಲು ಸಮಾಧಿಯಲ್ಲಿ ಮಲಗುವವರೆಗೂ ಇದ್ದೇ ಇದೆ, ಸುಖದುಃಖ, ಆದರೆ ನಮ್ಮಂತವರಿಗೆ ಮಾತ್ರ ದುಃಖದ ಮೂಟೆಯೇ ಹೊರತು ಸುಖ ಎನ್ನುವುದು ಕನಸಿನಲ್ಲಿಯೂ ಇಲ್ಲ. ಈಗ ಒಂದು ಅವಕಾಶ ಸಿಕ್ಕಿದೆ. ಇವನ ಹತ್ತಿರ ಇನ್ನೂರು ನಾಣ್ಯ ಇದೆ. ಇವನು ಭಿಕ್ಷು. ಹಿಂದೂ ಮುಂದೂ ಯಾರೂ ಇಲ್ಲ. ಸತ್ತರೆ ಕೂಡಾ ಇವನಿಗೇನು ನಷ್ಟವಿಲ್ಲ. ಪ್ರಾರಬ್ಧ! ಇಷ್ಟು ದಿನವಾಯಿತು. ನನಗೂ ವಯಸ್ಸಾಯಿತು. ಕಾಲವಾಯಿತು. ದೇಶವಾಯಿತು. ಆದರೂ ಒಂದುಕಡೆ ನಿಂತು ಏನೋ ಒಂದಷ್ಟು ನಿರಾತಂಕವಾಗಿ ಕಾಲಹಾಕೋಣ ಎಂದರೆ ಸಾಧ್ಯವಿಲ್ಲ. ಈಗ ಏನಾದರೂ ಮಾಡಿ ಈ ಹಣವನ್ನು ಸಂಪಾದಿಸಿದರೆ, ಕೊನೆಯವರೆಗೂ ಸುಖವಾಗಿರಬಹುದು.'' ಎಂದು ಗೊತ್ತುಮಾಡಿಕೊಂಡನು.

ಅವರು ಹೀಗೆಯೇ ಪ್ರಯಾಣಮಾಡುತ್ತಿರುವಾಗ ಒಂದು ಕೊಲ್ಲಿಯು ಸಿಕ್ಕಿತು. ದೋಣಿಯಲ್ಲಿ ಕುಳಿತು ಆ ಕೊಲ್ಲಿಯನ್ನು ದಾಟಬೇಕು. ಭಿಕ್ಷುವೂ ಷುವೆಯೂ ಹೋಗುವ ವೇಳೆಗೆ ಅಕ್ಕರೆಗೆ ಹೋಗುವುದಕ್ಕೆ ಒಂದು ದೋಣಿಯು ಸಿದ್ಧವಾಗಿತ್ತು. ಇಬ್ಬರೂ ಹತ್ತಿದರು. ಷುವೆಗೆ ಇನ್ನೂರು ನಾಣ್ಯದ ಯೋಚನೆ ತಾನೇತಾನಾಗಿದೆ.

ದೋಣಿಯು ನೀರಿನಮೇಲೆ ಹೊರಟಿತು. ಅರ್ಧದಾರಿ ಹೋಗುತ್ತಿದ್ದ ಹಾಗೆಯೇ ಬಿರುಗಾಳಿ ಹುಟ್ಟಿ ಕಡಲೆಲ್ಲ ಅಲ್ಲೋಲಕಲ್ಲೋಲವಾಯಿತು. ಆ ಭಾರಿಯ ಅಲೆಗಳು ಬರುತ್ತಿದ್ದರೆ, ದೋಣಿಯು ತಟ್ಟನೆ

ಮೇಲಕ್ಕೆ ಏಳುವುದು ಕೆಳಕ್ಕೆ ಧುಮುಕುವುದು ನೋಡಿದರೆ, ಅದಕ್ಕೇನಾದರೂ ದೆವ್ವ ಹಿಡಿದು ಕುಣಿಸುತ್ತಿದೆಯೋ ಎನ್ನುವಹಾಗಿದೆ. ಗಾಳಿಯೋ ಭರ್ ಎಂದು ಬೀಸುತ್ತಿದೆ.

ಭಿಕ್ಷುವು ದೋಣಿಯ ಮುಂಭಾಗದಲ್ಲಿ ನಿಂತು ಏನೋ ಯೋಚಿಸುತ್ತಿದ್ದನು. ಅವನು ಹಾಕಿದ್ದ ಬಟ್ಟೆಗಳು ಗಾಳಿಗೆ ಹಾರಾಡುತ್ತಿವೆ. ಷುಮೆಯು ನೋಡಿದನು : "ಇಂತಹ ಅವಕಾಶವು ಸಿಕ್ಕಿರುವುದು ದೇವರ ಕೃಪೆಯಿಂದ. ನಾನು ಬದುಕಿಕೊಳ್ಳಲಿ ಎಂದೇ ದೇವರು ಇಂತಹ ಒಳ್ಳೆಯ ಅವಕಾಶವನ್ನು ಕೊಟ್ಟಿರುವುದು. ಇದನ್ನು ಬಿಡಬಾರದು" ಎಂದುಕೊಂಡನು. ಸಾಲದೆ, ಭಿಕ್ಷುವು ಒಬ್ಬನೇ ನಿಂತಿದ್ದಾನೆ. ಇನ್ನು ಯಾರೂ ಸಮೀಪದಲ್ಲಿ ಇಲ್ಲ, ಸುತ್ತಲೂ ನೋಡುತ್ತ ಬಂದು, ಭಿಕ್ಷುವು ಏನೋ ಯೋಚನೆಯಲ್ಲಿರುವಾಗ ನೀರಿಗೆ ತಳ್ಳಿಬಿಟ್ಟನು. ಭಿಕ್ಷುವು ನೀರಿನಲ್ಲಿ ಬಿದ್ದು ಮುಳುಗಿಹೋದನು. ಅವನು ಏಳುವಹಾಗಿಲ್ಲ ಎನ್ನುವುದು ತನಗೆ ನಂಬಿಕೆಯಾದಮೇಲೆ ಷುಮೆಯು ಹೋ ಎಂದು ಅರಚಿಕೊಂಡನು. "ಭಿಕ್ಷುವು ನೀರಿನಲ್ಲಿ ಬಿದ್ದುಬಿಟ್ಟನು ಎಲ್ಲಿ? ಹಗ್ಗ ತೆಗೆದುಕೊಳ್ಳಿ. ಯಾರಾದರೂ ಇಳಿಯಿರಿ" ಎಂದು ಬೇಕಾದಹಾಗೆ ಆರ್ಭಟಮಾಡಿದನು. ಆದರೂ ಗಾಳಿಯು ಬಲು ಜೋರಾಗಿ ಬೀಸುತ್ತಿದ್ದುದರಿಂದ, ಯಾರೂ ಇಳಿಯುವುದಕ್ಕೂ ಆಗಲಿಲ್ಲ, ಏನುಮಾಡುವುದಕ್ಕೂ ಆಗಲಿಲ್ಲ.

ಷುಮೆಯು ತನ್ನಾಪ್ತಮಿತ್ರನು ಹೋದನು ಎಂದು ಒಂದು ಭಾರಿಯ ಆಟವನ್ನೇ ಕಟ್ಟಿದನು. ಗಳಿಗೆಗೆ ಹತ್ತು ನಿಟ್ಟುಸಿರು, ನಾಲ್ಕೈದು ಸಲವಾದರೂ ಕಣ್ಣೀರು. ಯಾರನ್ನು ಕಂಡರೂ "ನೋಡಿದಿರಾ! ನಮ್ಮ ಭಿಕ್ಷುವಿಗೆ ಹೀಗಾಗಬಹುದೆ? ಎಂತಹ ಒಳ್ಳೆಯ ಮನುಷ್ಯ! ಮೂರು ಹೊತ್ತೂ ಜಪತಪಸ್ಸುಗಳಲ್ಲಿಯೇ ಇದ್ದು ಇನ್ನೊಬ್ಬರ ಮಾತಿಗೂ ಬರದೆ ಇದ್ದವನಿಗೆ ಎಂಥಾ ಮೃತ್ಯು ಬಂತು?" ಎಂದು ಏನೇನೋ ಹೇಳಿಕೊಂಡು ಎಲ್ಲರಲ್ಲಿಯೂ ಅತ್ತುಕೊಂಡನು. ದೋಣಿಯವರೆಲ್ಲ "ಅಯ್ಯೋ ಪಾಪ!

ಬಹಳ ದುಃಖಪಡುತ್ತಾನೆ. ಎಷ್ಟೇ ಆಗಲಿ, ಸ್ನೇಹ ಎನ್ನುವುದು ಕಷ್ಟ!" ಎಂದು ನೊಂದು ಕನಿಕರಪಟ್ಟು ಎಲ್ಲರೂ ಸಮಾಧಾನ ಹೇಳಿದರು.

ಷುಮೆಯು ನಾಟಕದಲ್ಲಿ ಇನ್ನೊಂದು ಅಂಕ ಪ್ರಾರಂಭವಾಯಿತು. ಭಿಕ್ಷುವಿನ ಗಂಟು ಹೊಡೆದು ಬಿಡಬೇಕಲ್ಲ! ಅದಕ್ಕಾಗಿ ದೋಣಿಯ ಅಧಿಕಾರಿಯನ್ನು ಏಕಾಂತವಾಗಿ ಕರೆದು "ಏನಪ್ಪಾ! ತೀರವನ್ನು ಮುಟ್ಟುತ್ತಲೂ ಹೋಗಿ ಭಿಕ್ಷು ನೀರಿನಲ್ಲಿ ಉರುಳಿಕೊಂಡನು. ಎಷ್ಟು ಹುಡುಕಿದರೂ ಸಿಕ್ಕಲಿಲ್ಲ ಎಂದು ಅಧಿಕಾರಿಗಳಿಗೆ ತಿಳಿಸಿಬಿಡು. ಹಾಗೇ ನಾವೂ ಕೆಲವರು ಸಾಕ್ಷಿ ಹೇಳುತ್ತೇವೆ. ನಾನು ಹೋಗಿ ಅವನಿಗೆ ಸದ್ಗತಿಯಾಗುವ ಹಾಗೆ ಗುಡಿಯಲ್ಲಿ ಪೂಜೆಗೀಜೆ ಮಾಡಿಸುತ್ತೇನೆ" ಎಂದು ಹೇಳಿದನು.

ದೋಣಿಯ ಅಧಿಕಾರಿಯೂ "ಇದೇನಯ್ಯ! ಪೀಕಲಾಟ ತಂದಿಟ್ಟೆ. ಎಲ್ಲಾ ಬಿಟ್ಟು ಹೋಗಿ ಅವರಿಗೆ ಹೇಳು. ಅವರು ಎಂಟುದಿನವೋ ಹತ್ತು ದಿನವೋ ಅಲ್ಲಿ ನಿಲ್ಲಿಸಿಬಿಡಲಿ. ಅದುವರೆಗೂ ನಾನು ಬಾಯಿಗೆ ಬಟ್ಟೆಕಟ್ಟಿಕೊಂಡಿರುತ್ತೇನೆ. ಅದೆಲ್ಲ ಸಾಧ್ಯವಿಲ್ಲ. ಎಲ್ಲರನ್ನೂ ಕರೆದು ನಾನು ಹೇಳುತ್ತೇನೆ. ಅವನದು ಗಂಟೋ ಮೂಟೆಯೋ ನೀನು ತೆಗೆದುಕೋ, ಹೋಗು. ಪಾಪ! ಅವನಿಗೆ ಸದ್ಗತಿಯಾಗಬೇಕು. ಅದಕ್ಕೆ ನಾವೂ ಸೇರಿ ಪಟ್ಟಿಹಾಕಿ ಏನಾದರೂ ಒಂದಿಷ್ಟು ಮಾಡಿಕೊಡುತ್ತೇವೆ, ನೀನೂ ಅಷ್ಟು ಹಾಕಿ ಪೂಜೆಗೀಜೆ ಮಾಡಿಸು. ಪೋಲೀಸಿಗೆ ಹೇಳುವ ಸುದ್ದಿ ಮಾತ್ರ ಇಲ್ಲಿಗೇ ಬಿಟ್ಟುಬಿಡು" ಎಂದನು. ದೋಣಿಯಲ್ಲಿದ್ದ ಪ್ರಯಾಣಿಕರೂ ಈ ಸುದ್ದಿಯನ್ನು ಕೇಳಿ "ಸರಿ! ಸರಿ! ಎಲ್ಲಾದರೂ ಉಂಟೆ? ಇನ್ನು ಹೋಗಿ ಆ ಪೋಲೀಸಿನವರ ಕೈಗೆ ಸಿಕ್ಕಿ ಒದ್ದಾಡುವರು ಯಾರು?" ಎಂದರು. ಭಿಕ್ಷುವಿನ ಗಂಟು ಸಿಕ್ಕಿತು. ಅದಕ್ಕೆ ಬಡ್ಡಿಯಾಗಿ ಎಲ್ಲರೂ ಪಟ್ಟಿಹಾಕಿ ಎರಡುಮೂರು ಬೆಳ್ಳಿಯ ನಾಣ್ಯಕೊಟ್ಟರು. ಅಂತೂ ಷುಮೆಯು ರೊಟ್ಟಿ ಕೈಜಾರಿ ತುಪ್ಪಕ್ಕೆ ಬಿತ್ತು.

ಷುಮೆಯು ಸದ್ಯಕ್ಕೆ ಬದುಕಿದೆ ಎಂದುಕೊಂಡು ಒಳಗೇ ಸಂತೋಷ

ಪಟ್ಟುಕೊಂಡನು. ದೋಣಿಯನ್ನು ಬಿಟ್ಟು ಇಳಿದು ದೂರವಾಗಿ, ತನಗೆ ಯಾರೂ ಗೊತ್ತಿಲ್ಲದ ಊರಿಗೆ ಹೋಗಿ, ಅಲ್ಲಿ ಒಂದು ಅಂಗಡಿ ಹಾಕಿಕೊಂಡು ವ್ಯಾಪಾರ ಮಾಡಲು ಆರಂಭಿಸಿದನು. ಇವನ ಅದೃಷ್ಟ ಒಲಿದು ಚೆನ್ನಾಗಿ ಲಾಭ ಬಂತು. ಮನೆ ಬಾಗಿಲು ಮಾಡಿಕೊಂಡು ಹತ್ತು ಜನರಲ್ಲಿ ಗಣ್ಯನಾಗಿ ಸುಖವಾಗಿದ್ದನು.

ಎರಡು ಮೂರು ವರ್ಷಗಳೊಳಗಾಗಿ ಅವನಿಗೆ ಮದುವೆಯಾಯಿತು, ಮಕ್ಕಳಾಯಿತು. ಮೊದಲನೆಯ ಮಗುವಿಗೆ ಭಿಕ್ಷುವಿನ ಹೆಸರನ್ನೇ ಇಟ್ಟನು. ಆ ಭಿಕ್ಷುವು ಸತ್ತ ದಿನ ಹತ್ತು ಜನ ಭಿಕ್ಷುಗಳಿಗೆ ಚೊಕ್ಕ ಭೋಜನ ಮಾಡಿಸು ವನು, ದೇವಸ್ಥಾನದಲ್ಲಿ ಭಾರಿಯ ಪೂಜೆ ಮಾಡಿಸುವನು.

ಹೀಗಿರುವಾಗ, ಒಂದು ದಿನ ಸಂಜೆಯ ಹೊತ್ತು. ನಗರದ ಮಗ್ಗು ಲಲ್ಲಿರುವ ಉದ್ಯಾನದ ಕಡೆ ಹೋಗಿದ್ದಾನೆ ಅಲ್ಲಿ ತಾನು ನೀರಿಗೆ ನೂಕಿದ ಭಿಕ್ಷುವೇ ನಿಂತಿರುವ ಹಾಗೆ ಕಾಣಿಸಿತು. ಅವನು ನೀರಿಗೆ ಬಿದ್ದು ಮುಳುಗಿ ಹೋಗಿರುವುದನ್ನು ತಾನೇ ನೋಡಿದ್ದಾನೆ. ಅಂಥಾದ್ದರಲ್ಲಿ ಅವನು ಎಲ್ಲಿಂದ ಬರಬೇಕು ? ಆದರೂ ಎಷ್ಟೆಷ್ಟು ಸಲ ತಿರುಗಿ ನೋಡಿದರೂ ಅವನೇ ! ಸಂದೇಹವಿಲ್ಲ.

ಸುಮ್ಮನೆಯೇ ಮನೆಗೆ ಬಂದನು. ಅವನಿಗೆ ಭಿಕ್ಷುವು ಕಣ್ಣೆದುರಿಗೆ ನಿಂತಿರುವಂತೆ ಕಾಣುವುದಕ್ಕೆ ಮೊದಲಾಯಿತು. ಅಷ್ಟೇನು ಆ ರೂಪವನ್ನು ಕಣ್ಣಿಗೆ ಕಟ್ಟಿದಂತೆ ಆಗಿದೆ. ಎಲ್ಲಿ ನೋಡಿದರೂ ಭಿಕ್ಷುವೇ ! ಅದೇ ಭಿಕ್ಷುವು ಬಂದು " ಎಂಥಾ ಕೆಲಸಮಾಡಿದೆ ! ನನ್ನನ್ನು ನೀರಿನಲ್ಲಿ ನೂಕಿ, ನನ್ನ ಗಂಟು ಹಾರಿಸಿಕೊಂಡು ಬಂದು ಮೆರೆಯುತ್ತಿದ್ದೀಯಾ ? ನನ್ನ ಗಂಟು ನನಗೆ ಕೊಟ್ಟುಬಿಡು. ಇಲ್ಲದಿದ್ದರೆ ನೋಡು " ಎಂದು ಏನೇನೋ ಹೇಳಿ ಹೆದರಿಸಿ ದಂತೆ ಆಗುವುದು. ಎಲ್ಲಿ ಕುಳಿತರೂ ಎಲ್ಲಿ ನಿಂತರೂ ಅದೇ ಭಿಕ್ಷು. ತನ್ನ ಅಪರಾಧವನ್ನು ಕುರಿತು ಹೇಳುವುದು. ಪಾಪಿ ! ಪಾಪಿ ! ಎಂದು ಕಣ್ಣು ಕಣ್ಣು ಬಿಡುವುದು.

ಷುಮೆಯು ದೇವಸ್ಥಾನಕ್ಕೆ ಹೋಗಿ ಚೀಟಿ ಕಟ್ಟಿಸಿಕೊಂಡನು. ಗುಣವಾಗಲಿಲ್ಲ. ಜಪಮಾಡಿಸಿದನು, ಪಿಶಾಚಿಯು ಕಣ್ಣಿಗೆ ಬೀಳುವುದು ನಿಲ್ಲಲಿಲ್ಲ. ನೂರು ಜನರನ್ನು ಕರೆಸಿ ಸಂತರ್ಪಣೆ ಮಾಡಿಸಿದನು, ಆ ನೋಟ ತಪ್ಪಲಿಲ್ಲ. ಮಾಂತ್ರಿಕರನ್ನು ಕರೆಸಿ ಪೂಜೆ ಹಾಕಿಸಿಕೊಂಡನು, ಸರಿಹೋಗ ಲಿಲ್ಲ. ಇದೇನಾದರೂ ವ್ಯಾಧಿಯೋ ಎಂದು ವೈದ್ಯರಿಗೆ ಕೈತೋರಿಸಿದನು. ಅವರು ದೇಹದಲ್ಲಿ ಏನೂ ರೋಗವಿಲ್ಲ ಎಂದರು. ಅವನಿಗೆ ಏನು ಮಾಡ ಬೇಕೋ ತಿಳಿಯದೆ ಹೋಯಿತು.

ರೋಗವು ಬಲಿಯಿತು. ಷುಮೆಯು ಹಾಸುಗೆ ಹಿಡಿದೂ ಮಲಗಿ ದನು. ಆಗಾಗ ಜ್ಞಾನವು ತಪ್ಪುವುದು. "ಹೋ! ಭಿಕ್ಷು ಬಂದ. ಭಿಕ್ಷು ಬಂದ. ನನ್ನನ್ನು ಕೊಂದುಹಾಕಿ ಬಿಡುತ್ತಾನೆ. ಅಯ್ಯಯ್ಯೋ! ನನ್ನನ್ನು ಪೋಲೀಸಿನವರಿಗೆ ಹಿಡಿದುಕೊಡುತ್ತಾನಂತೆ! ಅಯ್ಯಯ್ಯೋ!" ಎಂದು ಕಿರಿಚಿಕೊಂಡು ಏಳುವನು. ಯಾರಿಗೂ ಇದೊಂದೂ ಅರ್ಥವಾಗದು. ಎಲ್ಲರೂ "ಅಯ್ಯೋ ಪಾಪ! ಯಾವುದೋ ಪಿಶಾಚಿ ಹಿಡಿದಿದೆ. ಇದನ್ನು ಬಿಡಿಸುವವರು ಯಾರೂ ಬರಲಿಲ್ಲವಲ್ಲ!" ಎಂದು ವ್ಯಸನಪಟ್ಟುಕೊಳ್ಳುವರು.

ಆ ಊರಿನ ಮಠದಲ್ಲಿದ್ದ ಭಿಕ್ಷುವು ಬಂದು ತಾನು ಕಲಿತ ಮಂತ್ರ ತಂತ್ರಗಳನ್ನೆಲ್ಲಾ ಮಾಡಿದನು, ಪೂಜೆ ಹಾಕಿದನು, ಯಂತ್ರ ಕಟ್ಟಿದನು, ಏನು ಮಾಡಿದರೂ ಕಿರಿಚಿಕೊಳ್ಳುವುದು ತಪ್ಪಲಿಲ್ಲ. ದಿನದಿನಕ್ಕೂ ಅವಸ್ಥೆಯು ಕೆಡುತ್ತ ಬಂತು. ಷುಮೆಯು ಬದುಕುವುದಿಲ್ಲ ಎನ್ನುವಮಟ್ಟಿಗೂ ಆಗಿ ಹೋಯಿತು.

ಹೀಗೆ ಎಲ್ಲವೂ ವಿಷಮಿಸಿಕೊಂಡಿರುವಾಗ ಒಬ್ಬ ಭಿಕ್ಷುವು ಅವರ ಮನೆಗೆ ಬಂದನು. ಅವನು ಅಲ್ಲಿ ಯಾರಿಗೂ ಪರಿಚಿತನಲ್ಲ. ಹೊಸಬ. ಅವನು ಬಂದು "ನಾನು ಷುಮೆಯವರನ್ನು ನೋಡಬಹುದೇ? ಅವರಿಗೆ ಕಾಯಿಲೆ ಯೆಂದು ಕೇಳಿದೆ. ನನಗೆ ಭೂತವೈದ್ಯ ಬರುತ್ತದೆ. ನಾನು ಗುಣಮಾಡಬಲ್ಲೆ" ಎಂದನು. ಮನೆಯವರಿಗೆ ಯಾರಾದರೂ ಬಂದು ಅಷ್ಟು ಅಂದಾರೆ ಎನ್ನಿ

ಸಿತ್ತು. ಅವನಿಗೆ ಬೇಕಾದಹಾಗೆ ಗೌರವ ತೋರಿಸಿ ಒಳಕ್ಕೆ ಕರೆದುಕೊಂಡು ಹೋಗಿ ಷುವೆುಯ ಮುಂದೆ ನಿಲ್ಲಿಸಿದರು. ಆಗತಾನೆ ಅವನಿಗೆ ಜ್ಞಾನ ಬಂದಿತ್ತು. ಇವನು ಹೋಗಿ ಎದುರಿಗೆ ನಿಲ್ಲುತ್ತಲೂ ಷುವೆುಯು ಇನ್ನೊಂದು ಸಲ ಘಟ್ಟಿಯಾಗಿ ಚೀರಿಬಿಟ್ಟನು. "ಅವನೇ! ಅವನೇ! ಅಯ್ಯಯ್ಯೋ!" ಎಂದು ಹುಚ್ಚಾಪಟ್ಟೆ ಕಿರುಚುತ್ತ, ಕೆಳಕ್ಕೆ ಬಿದ್ದುಹೋದನು. ಆ ಸಂಕಟ, ಆ ಭೀತಿ, ನೋಡಿದವರಿಗೇ ಹೆದರಿಕೆಯಾಗುವ ಹಾಗೆ ಇತ್ತು.

ಭಿಕ್ಷುವು "ಇರಲಿ, ಮಂತ್ರವಾದಿಗಳನ್ನು ಕಂಡರೆ ಪಿಶಾಚಗಳು ಹೀಗೆಲ್ಲ ಮಾಡುವುದುಂಟು, ನೀವು ಯೋಚಿಸಬೇಡಿ" ಎಂದು ಮನೆಯವರಿಗೆಲ್ಲ ಸಮಾಧಾನ ಹೇಳಿ ಅವರನ್ನೆಲ್ಲ ಹೊರಕ್ಕೆ ಕಳುಹಿಸಿ ಬಿಟ್ಟನು. ತಾನೊಬ್ಬನೇ ನಿಂತು ಷುವೆುಯ ಒಳಿಗೆ ಹೋಗಿ, "ಷುವೆು! ಷುವೆು! ನಾನು ನಿನ್ನನ್ನು ಹಿಂಸಿಸುವುದಿಲ್ಲ. ಪ್ರೀತಿಯಿಂದ ಬಂದಿದ್ದೇನೆ. ನೀನು ಮಾಡಿದ ಅಪರಾಧವನ್ನು ಕ್ಷಮಿಸಿದ್ದೇನೆ. ನೀನು ಮತ್ತೆ ಅದರ ವಿಚಾರವಾಗಿ ಯೋಚಿಸಬೇಡ. ನಾನೂ ಮರೆತೆ, ನೀನೂ ಮರೆತುಬಿಡು" ಎಂದು ಮೆಲ್ಲಗೆ, ನಿಧಾನವಾಗಿ, ಒಳ್ಳೆಯ ಮಾತನಾಡುತ್ತ ಅವನಿಗೆ ಸಮಾಧಾನ ಮಾಡಿದನು.

ಆ ಭಿಕ್ಷುವು, ಉದಾರಹೃದಯದಿಂದ ಹೊರಡುವ ಅಮೃತದಿಂದ ತುಂಬಿರುವ ಮಾತುಗಳನ್ನು ಆಡುತ್ತ, ಹಿಂದಿನ ಅಪರಾಧವನ್ನು ಮರೆತ ಮನಸ್ಸಿನಿಂದ ಅವನ ಮೈ ಕೈ ಸವರಿ ಸಮಾಧಾನಮಾಡುತ್ತ ಬರಲು, ಷುವೆುಗೆ ಅಷ್ಟು ಹೊತ್ತಿನ ಮೇಲೆ ಸ್ಮೃತಿ ಬಂತು. ಮೃದುವಾಗಿ, ಸಂಬಿಸುವ ಒಳ್ಳೆಯ ಮಾತುಗಳಿಂದ ಭಿಕ್ಷುವು "ಷುವೆು! ಹಿಂದಿನದನ್ನು ಮರೆತು ಬಿಡು. ಆ ದಿನ ಸಮುದ್ರದಲ್ಲಿ ಬಿದ್ದಾಗ ನಾನು ಸಾಯಲಿಲ್ಲ. ನನಗೆ ಈಜು ಚೆನ್ನಾಗಿ ಬರುತ್ತದೆ. ಅದರಿಂದ ಬದುಕಿಕೊಂಡೆ. ಆದರೆ ಗಾಳಿಯ ಹೊಡೆತ ಹೆಚ್ಚಾಗಿದ್ದುದರಿಂದ ನಾನು ದೋಣಿಯನ್ನು ಹಿಡಿಯಲಾಗಲಿಲ್ಲ. ದೇವರು ಇನ್ನೆಲ್ಲಿಯೋ ಕರೆದುಕೊಂಡು ಹೋದ. ಹತ್ತುಜನ ಶ್ರೀಮಂತರು

ಮನಸ್ಸು ಮಾಡಿದರು. ನನಗೆ ಬೇಕಾದಷ್ಟು ಹಣ ಸಿಕ್ಕಿತು. ಒಂದು ಒಳ್ಳೆಯ ವಿಗ್ರಹವನ್ನು ಮಾಡಿಸಿ, ಅದಕ್ಕೆ ತಕ್ಕ ಗುಡಿ ಕಟ್ಟಿಸಿ, ಪ್ರತಿಷ್ಠೆ ಮಾಡಿಸಿದೆ. ನನ್ನ ಆಸೆಯೆಲ್ಲ ಪೂರ್ಣವಾಯಿತು. ನಾನು ಸುಖವಾಗಿದ್ದೇನೆ.'' ಎಂದು ಹೇಳಿದನು.

ಷುಮೇಗೆ ಭಿಕ್ಷುವಿನ ಮಾತು, ಉಪಚಾರ, ಎಲ್ಲ ಸೇರಿ ಮನಸ್ಸು ಸಮಾಧಾನವಾಗುತ್ತ ಬಂತು. ಬಂದಿರುವವನು ತನ್ನಂತಹ ಮನುಷ್ಯ, ಪಿಶಾಚವಲ್ಲ, ಎಂದು ನಂಬಿಕೆಯಾಯಿತು. ಮೆಲ್ಲಗೆ ಕಣ್ಣುಬಿಟ್ಟು ನೋಡಿದನು. ನಂಬಿಕೆಯಾಯಿತು. ಎದ್ದು "ನಾನು ನಿನಗೆ ಬಹಳ ಅಪರಾಧ ಮಾಡಿದೆ. ಮನ್ನಿಸು'' ಎಂದು ಕಾಲು ಹಿಡಿದುಕೊಂಡನು.

ಭಿಕ್ಷುವು ನಕ್ಕನು: "ಅಯ್ಯೋ! ಮನೆಬಾಗಿಲು ಮಡದಿಮಕ್ಕಳು ಬೇಡವೆಂದು ಬಿಟ್ಟವನು ಹಿಂದಿನ ಒಂದು ಸಣ್ಣ ಅಪರಾಧವನ್ನೇಕೆ ಮರೆಯದೆ ಇಟ್ಟುಕೊಂಡಿರಲಿ? ಅದು ಯಾವಾಗಲೋ ಮರೆತೆ, ನಾನು ಯಾತ್ರೆ ಮಾಡಿಕೊಂಡು ಬರುತ್ತಾ ಮಾರ್ಗವಶಾತ್ ಇಲ್ಲಿಗೆ ಬಂದೆ. ಅಕಸ್ಮಾತ್ತಾಗಿ ನಿನ್ನನ್ನು ಕಂಡೆ. ನೀನೇ ಹೌದೋ ಅಲ್ಲವೋ ಎಂದು ಒಂದು ಗಳಿಗೆ ಕಣ್ಣಿಟ್ಟು ನೋಡಿದೆ. ನಾನಾಗಿ ಒಂದು ಮಾತನಾಡಿಸಿದರೆ ನೀನು ಎಷ್ಟು ನೊಂದುಕೊಳ್ಳುವೆಯೋ ಎಂದು ಹಿಂದೆಗೆದು ಹಾಗೆ ಹೊರಟುಹೋದೆ. ಕೊನೆಗೆ ನೀನು ಹೀಗೆ ಹಾಸುಗೆ ಹಿಡಿದು ಮಲಗಿರುವುದೂ ನೀನು ಪೇಚಾಡಿಕೊಳ್ಳುವುದೂ ಕೇಳಿದೆ. ಇದೇ ಕಾರಣವಿರಬಹುದು, ನಾನು ಹೋಗಿ ಹೇಳಿದರೆ ಗುಣವಾಗಬಹುದು, ಎಂದುಕೊಂಡು ನಾನೇ ಬಂದೆ. ನಿನಗೆ ಗುಣವಾಯಿತು. ಇನ್ನು ಏನೂ ಯೋಚನೆಯಿಲ್ಲದೆ ಸುಖವಾಗಿರು. ನಿನ್ನ ಪಾಪಕ್ಕೆ, ಪಾಪ! ದೇವರು ಬಹಳ ಭಾರಿಯ ಶಿಕ್ಷೆಯನ್ನು ವಿಧಿಸಿದನು. ಇನ್ನು ಹಿಂದಿನದೆಲ್ಲ ಮರೆತು ಸುಖವಾಗಿರು. ಹೋಗಿಬರಲೆ?' ಎಂದನು.

ಭಿಕ್ಷುವು ಮಾತನಾಡುತ್ತಿರುವಾಗ ಷುಮೆಯ ಕಣ್ಣಿನಲ್ಲಿ ಧಾರಾಳವಾಗಿ ನೀರು ಸುರಿಯುತ್ತಿತ್ತು. ಎಲ್ಲವೂ ಮುಗಿದಮೇಲೆ "ಅಯ್ಯೋ!

ನಾನು ಮಿತ್ರದ್ರೋಹಿ. ನನ್ನನ್ನು ಕ್ಷಮಿಸಿದೆ. ನನ್ನದೊಂದು ಮಾತು ಕೇಳು. ನಿನ್ನ ಹಣದಿಂದಲೇ ನಾನು ಬದುಕಿದುದು. ಈ ಐಶ್ವರ್ಯವೆಲ್ಲ ನಿನ್ನ ಇನ್ನೂರು ಬೆಳ್ಳಿಯ ಸಾಮ್ಯದಿಂದಲೇ ಆದುದು. ಆದರಿಂದ ನೀನು ಐಶ್ವರ್ಯ ವನ್ನೆಲ್ಲ ತೆಗೆದುಕೊಂಡು ನಿನಗೆ ತೋರಿದುದು ಅಷ್ಟು ಕೊಡು. ನಾನು ನಿನ್ನ ಹೆಸರು ಹೇಳಿ ಬದುಕಿಕೊಳ್ಳುತ್ತೇನೆ" ಎಂದನು.

ಭಿಕ್ಷುವು ಒಪ್ಪಲಿಲ್ಲ. ಇಬ್ಬರಿಗೂ ಬಹಳ ಮಾತುಗಳು ನಡೆದು ಕೊನೆಗೆ "ಭಿಕ್ಷುವು ತನ್ನ ಇನ್ನೂರರ ಜೊತೆಗೆ ಇನ್ನೂ ಇನ್ನೂರು ತೆಗೆದು ಕೊಳ್ಳುವುದು" ಎಂದಾಯಿತು. ಭಿಕ್ಷುವು ಷುಮೆಯ ಸಮಾಧಾನಕ್ಕೆಂದು ಅದನ್ನು ತೆಗೆದುಕೊಂಡು ಹೋಗಿ 'ಷುಮೆಯುವರ ದಾನ' ಎಂದು ದೇವಸ್ಥಾನಕ್ಕೆ ಒಪ್ಪಿಸಿದನು.

ಭಿಕ್ಷುವು ಷುಮೆಯ ಮನೆಯಲ್ಲಿ ಕೊಂಚ ಕಾಲವಿದ್ದು ಅನಂತರ ತನ್ನ ಪಾಡಿಗೆ ತಾನು ಹೊರಟುಹೋದನು. ಷುಮೆಯು ಬಹುಕಾಲ ತನ್ನ ಇಷ್ಟಬಾಂಧವರೊಡನೆ ಸುಖವಾಗಿದ್ದನು.

---

## ವಿದುರ ಪಂಡಿತ

ಅಂಗದೇಶದ ಕಾಳಚಂದ ನಗರದಲ್ಲಿ ನಾಲ್ಕು ಜನ ಬ್ರಾಹ್ಮಣರಿದ್ದರು. ಅವರು ಲೋಕಾಂತರಗಳಿಗೆ ಹೋಗಿ ಬರಬಲ್ಲಂತಹ ಸಮರ್ಥರು. ಒಂದು ದಿನ ಅವರು ತಮ್ಮ ತಮ್ಮ ಪ್ರಭಾವಗಳಿಂದ ಬೇರೆ ಬೇರೆ ಲೋಕಗಳಿಗೆ ಹೋಗಿಬಂದರು. ಅವರು ಹೋಗಿದ್ದ ಲೋಕಗಳಲ್ಲಿದ್ದ ವಿಶೇಷಗಳನ್ನು ಒಬ್ಬರಿಗೊಬ್ಬರು ವರ್ಣಿಸುತ್ತಿದ್ದರು. ಅದನ್ನು ಅವರನ್ನು ಸೇವಿಸಿಕೊಂಡಿದ್ದ ವರು ಕೇಳಿದರು. ಅವರಿಗೆ ಆಸೆಯಾಗಿ "ಸ್ವಾಮಿ! ಇಂತಹ ಲೋಕಗಳಿಗೆ ಹೋಗಿಬರಲು ಏನೇನು ಪುಣ್ಯಮಾಡಬೇಕು?" ಎಂದು ಕೇಳಿದರು. ಅದ

ಕ್ಕವರು "ಅದಕ್ಕೇನು ಮಹಾ! ಬೇಕೆಂದರೆ ಆಯಾ ಲೋಕಗಳ ಅರಸು ಗಳೇ ಆಗಬಹುದು" ಎಂದು ಅದಕ್ಕೆ ಬೇಕಾದ ಸಾಧನಗಳನ್ನು ಹೇಳಿಕೊಟ್ಟರು. ಆ ಸೇವಕರಲ್ಲಿ ನಾಲ್ವರು ಸಾಧನಗಳನ್ನು ಮಾಡಿ ತಮ್ಮ ತಮ್ಮ ಪುಣ್ಯಪ್ರಭಾವದಿಂದ ಆಯಾ ಲೋಕಗಳ ಅಧಿಪತಿಗಳಾಗಿ ಹುಟ್ಟಿದರು. ಒಬ್ಬನು ನಾಗಲೋಕದಲ್ಲಿ ವರುಣನೆಂಬ ಹೆಸರಿನಿಂದ ಅರಸಾದನು. ಇನ್ನೊಬ್ಬನು ಶಕ್ರನೆಂಬ ಹೆಸರಿನಿಂದ ಸ್ವರ್ಗಲೋಕದ ಅಧಿಪತಿಯಾದನು. ಮತ್ತೊಬ್ಬನು ಸುಪರ್ಣನೆಂದು ಗರುಡಲೋಕದ ಪ್ರಭುವಾದನು. ಮತ್ತೊಬ್ಬನು ಧನಂಜಯನೆಂದು ಭೂಲೋಕದ ನಾಥನಾಗಿ ಆಳಿದನು.

ಇಂದ್ರಪ್ರಸ್ಥವೆಂಬ ಕುರುರಾಜಧಾನಿಯುಂಟು. ಅಲ್ಲಿಯೇ ಧನಂಜಯನು ರಾಜನಾಗಿದ್ದನು. ಆ ರಾಜನ ಆಸ್ಥಾನದಲ್ಲಿ ವಿದುರ ಪಂಡಿತನೆಂಬ ವಿದ್ವಾಂಸನಿದ್ದನು. ಆತನ ಯಶಸ್ಸು ದಿಗಂತಗಳಿಗೆಲ್ಲ ಹಬ್ಬಿತ್ತು. ಲೋಕಲೋಕಗಳಿಂದೆಲ್ಲ ಜನರು ಆತನ ಬಳಿಗೆ ಬಂದು ಆತನ ಉಪದೇಶವನ್ನು ಪಡೆಯುತ್ತಿದ್ದರು. ಧನಂಜಯನೂ ಆತನ ಉಪದೇಶದಿಂದ ವೈರಾಗ್ಯ ಸಂಪನ್ನನಾಗಿ ತನ್ನ ರಾಜಧಾನಿಯ ಬಳಿಯಲ್ಲಿ ಒಂದು ತಪೋವನವನ್ನು ನಿರ್ಮಿಸಿ ಆಗಾಗ ಅಲ್ಲಿಗೆ ಹೋಗಿ ಇದ್ದು ಬರುತ್ತಿದ್ದನು.

ಇತ್ತ ಇನ್ನು ಮೂರುಲೋಕದ ಅರಸುಗಳಿಗೂ ಅವರ ಪೂರ್ವಜನ್ಮದ ಪುಣ್ಯದ ವಾಸನೆಯ ಬಲದಿಂದ ಸನ್ಮಾರ್ಗದಲ್ಲಿ ಅಭಿಲಾಷೆ ಹುಟ್ಟಿತು. ಅವರು ರಾಜ್ಯಕೋಶಗಳನ್ನೆಲ್ಲ ಬಿಟ್ಟು ಕೆಲವು ದಿನವಾದರೂ ತಪಸ್ಸುಮಾಡಿ ಬರೋಣ ಎಂದು ಹೊರಟರು. ತಮ್ಮ ತಮ್ಮ ಲೋಕಗಳಿಗಿಂತ ತಪಸ್ಸಿಗೆ ಭೂಲೋಕವೇ ಪ್ರಶಸ್ತವೆಂದು ಅವರು ಬಂದರು. ಭೂಲೋಕವನ್ನೆಲ್ಲ ಸುತ್ತಿ ನೋಡಿ, ಧನಂಜಯನು ನಿರ್ಮಿಸಿರುವ ತಪೋವನವು ಬಹಳ ಅನುಕೂಲವಾಗಿರುವುದೆಂದು ಅಲ್ಲಿಗೇ ಬಂದು ತಪಸ್ಸಿಗೆ ನಿಂತರು.

ಕೆಲವು ಕಾಲದಲ್ಲಿ ಅವರಿಗೂ ವಿದುರಪಂಡಿತನ ಕೀರ್ತಿಯು ತಿಳಿಯಿತು. ಅಂತಹವನ ಉಪದೇಶವನ್ನು ತಾವೂ ಕೇಳಬೇಕೆನ್ನಿಸಿ ತಾವೂ

ಆತನ ಬಳಿಗೆ ಹೋದರು. ಅಲ್ಲಿ ಅವರು ತಮ್ಮ ತಮ್ಮ ಪ್ರತಾಪವನ್ನು ಹೇಳಿಕೊಂಡರು. ವರುಣನು "ಅಯ್ಯೋ! ಕೋಪವೆಂಬುದು ಬಲು ತೀವ್ರವಾದುದು. ನಾವು ನಾಗರು. ನಮ್ಮ ಜಾತಿಯವರಿಗಂತೂ ಅತಿ ಕೋಪವು ಸಹಜವಾದುದು, ಹೀಗೆ ಸಹಜವಾದ ಕೋಪವನ್ನೂ ಬಿಟ್ಟು ನಾನು ತಪಸ್ಸಿಗೆ ಬಂದಿರುವೆನು" ಎಂದು ಹೇಳಿದನು.

ವಿದುರ ಪಂಡಿತನು ಅದನ್ನು ಕೇಳಿ "ಹೌದು, ಕೋಪವೆಂಬುದು ಪರಮ ಶತ್ರುವು. ಲೋಕದ ಅನರ್ಥಗಳಿಗೆಲ್ಲ ಅದೇ ಕಾರಣವು. ಅಂತಹ ಕೋಪವನ್ನು ಸಹಿಸಬಲ್ಲ ಸಾಮರ್ಥ್ಯವು ಅತಿಶಯವೇ ಸರಿ. ಈ ಸಹನೆಯು ನಿನಗೆ ಶಾಶ್ವತವಾಗಿರಲಿ. ಹಾಗಾಗುವಂತೆ ಚೆನ್ನಾಗಿ ತಪಸ್ಸುಮಾಡು" ಎಂದು ಹೇಳಿದನು. ವರುಣನು ಆತನ ಉಪದೇಶವನ್ನು ಕೇಳಿ ಸಂತೋಷ ಪಟ್ಟು ಆತನಿಗೆ ತಾನು ಧರಿಸಿದ್ದ ನವರತ್ನಖಚಿತವಾದ ಒಂದು ಒಡವೆಯನ್ನು ಕಾಣಿಕೆಯಾಗಿ ಒಪ್ಪಿಸಿದನು.

ಅನಂತರ ಸುಪರ್ಣನು ಮಾತನಾಡಿದನು: "ಅಯ್ಯಾ! ಪಂಡಿತ ಶ್ರೇಷ್ಠನೆ! ಈ ನಾಗರಿಗೂ ನಮಗೂ ವೈರವೆಂಬುದು ಸಹಜವಾದುದು. ದೈವವೇ ನಾಗರನ್ನು ಗರುಡರ ಆಹಾರವೆಂದು ಗೊತ್ತುಮಾಡಿರುವುದು. ಆದರಿಂದ ನಾನು ವರುಣನನ್ನು ಹಿಡಿದು ತಿಂದರೂ ನನಗೆ ಪಾಪವಿಲ್ಲ. ಆದರೂ ನನ್ನ ಕ್ಷುಧೆಯನ್ನು ಸಹಿಸಿಕೊಂಡು ಸಹಜವಾದ ವೈರವನ್ನು ಬಿಟ್ಟು ಇವನೊಡನೆಯೇ ತಪಸ್ಸುಮಾಡುತ್ತಿರುವೆನು" ಎಂದನು.

ವಿದುರ ಪಂಡಿತನು "ಅಯ್ಯಾ! ಸುಪರ್ಣರಾಜನೆ! ಪ್ರಾಣಿಗಳಿಗೆ ಕ್ಷುತ್ತೃಷೆಗಳೂ ಕಾಮಕ್ರೋಧಗಳೂ ಪ್ರೀತಿದ್ವೇಷಗಳೂ ಸಹಜವಾದವು. ಹಾಗೆಂದು ಅವುಗಳಿಗೆ ಸೋತು ಅವುಗಳಲ್ಲಿಯೇ ಮುಳುಗುವುದಕ್ಕಿಂತ ಅವುಗಳನ್ನು ಬಿಟ್ಟಿರುವುದೇ ಶ್ರೇಯಸ್ಸು. ಆದರಿಂದ ಇದೇ ಮಾರ್ಗದಲ್ಲಿದ್ದು ಕೊಂಡು ಶ್ರೇಯಸ್ಸನ್ನು ಪಡೆ" ಎಂದನು. ಸುಪರ್ಣನು ಅದನ್ನು ಕೇಳಿ ಸಂತೋಷಪಟ್ಟು ತನ್ನ ಕತ್ತಿನಲ್ಲಿದ್ದ ಸುವರ್ಣಮಾಲಿಕೆಯನ್ನು ಆ ಪಂಡಿತನಿಗೆ

ಒಪ್ಪಿಸಿ ನಮಸ್ಕಾರಮಾಡಿದನು.

ಶಕ್ರನು "ಅಯ್ಯಾ! ಪಂಡಿತವರ್ಯನೇ! ನಾವು ಸ್ವರ್ಗಲೋಕ ವಾಸಿಗಳು. ನಮಗೆ ಭೋಗಗಳೆಲ್ಲವೂ ಸಹಜವಾದವು. ನಾವು ಯಾವಾಗಲೂ ಭೋಗಪಡುವುದಕ್ಕೇ ಹುಟ್ಟಿದವರು. ಆದರೂ ಅವೆಲ್ಲವನ್ನೂ ಬಿಟ್ಟು ನಾನು ತಪಸ್ಸನ್ನು ಮಾಡುತ್ತಿರುವೆನು. ವಿಮಾನ ಸಂಚಾರ, ನಂದನ ವನ ವಿಹಾರ, ಅಪ್ಸರೆಯರ ಭೋಗ, ಇವುಗಳನ್ನೆಲ್ಲ ಬಿಟ್ಟಿರುವೆನು" ಎಂದನು.

ವಿದುರ ಪಂಡಿತನು "ಅಯ್ಯಾ ಶಕ್ರಪ್ರಭುವೆ! ಜೀವಿಗಳಿಗೆ ಭೋಗವು ಸಹಜವಾದುದು. ಅಂತಹ ಭೋಗವನ್ನು ಬಿಟ್ಟು ತ್ಯಾಗದಿಂದ ನಡೆಯುವುದು ಶ್ರೇಯಸ್ಸು, ಅದನ್ನೇ ಹಿಡಿದು ಸಾಧಿಸು. ಒಳ್ಳೆಯದಾಗುವುದು" ಎಂದನು. ಶಕ್ರನು ಅದನ್ನು ಕೇಳಿ ಸಂತೋಷಪಟ್ಟು ಇನ್ನು ಯಾವ ಲೋಕದಲ್ಲಿಯೂ ದೊರೆಯದಂತಹ ಅಪೂರ್ವವಾದ ಸ್ವರ್ಗಲೋಕದ ವಸ್ತ್ರಾಭರಣಗಳನ್ನು ಆತನಿಗೆ ಒಪ್ಪಿಸಿದನು.

ಅನಂತರ ಭೂಲೋಕದ ಅರಸು ಧನಂಜಯನು ಮುಂದೆ ಬಂದು ನಮಸ್ಕರಿಸಿ "ಅಯ್ಯಾ! ಮೇರುವನ್ನು ಬಳಸಿರುವ ಮಹೀಮಂಡಲವೆಲ್ಲವೂ ನನ್ನದು. ಮನೆತುಂಬ ಮಡದಿಮಕ್ಕಳು. ಇದೆಲ್ಲವೂ ನಶ್ವರವೆಂದು ತಿಳಿದು ವೈರಾಗ್ಯದಿಂದ ಇಲ್ಲಿಗೆ ಬಂದು ತಪಸ್ಸು ಮಾಡುತ್ತಿರುವೆನು" ಎಂದು ಹೇಳಿದನು.

ವಿದುರ ಪಂಡಿತನು "ಹೌದು! ಅರಸೇ! ಮನುಷ್ಯರಿಗೆ ಮನಸ್ಸು ಭೋಗದ ಕಡೆಗೆ ಹರಿಯುವಂತೆ, ತ್ಯಾಗದ ಕಡೆಗೂ ವೈರಾಗ್ಯದ ಕಡೆಗೂ ಹರಿಯದು. ಹಳ್ಳದ ಕಡೆಗೆ ಹರಿಯುವ ನೀರನ್ನು ದಿಣ್ಣೆಯಕಡೆಗೆ ತಿದ್ದುವಂತೆ, ಮನಸ್ಸನ್ನು ಭೋಗದಕಡೆ ತಪ್ಪಿಸಿ ವೈರಾಗ್ಯದಕಡೆ ಹರಿಯಿಸುವುದೇ ಒಂದು ಭಾಗ್ಯ! ಅದು ನಿನಗೆ ಶಾಶ್ವತವಾಗಿರಲಿ" ಎಂದು ಹರಕೆ ಹಾಕಿದನು.

ಧನಂಜಯನು ಸಂತೋಷಪಟ್ಟು ಒಂದು ಸಾವಿರ ಆಕಳುಗಳನ್ನೂ ಬೇಕಾದ ಧನಕನಕಗಳನ್ನೂ ಕೊಟ್ಟನು. ಹೀಗೆ ಅಲ್ಲಿ ಇನ್ನೂ ಕೆಲವುಕಾಲ

ತಪಸ್ಸು ಮಾಡಿಕೊಂಡಿದ್ದು ಅನಂತರ ವಿದುರ ಪಂಡಿತನ ಅಪ್ಪಣೆ ಪಡೆದು ತಮ್ಮ ತಮ್ಮ ಲೋಕಗಳಿಗೆ ಹೋದರು.

ವರುಣನು ಮನೆಗೆ ಹೋಗುತ್ತಲೂ ಅವನ ಹೆಂಡತಿ ವಿಮಲಾ ದೇವಿಯು ಗಂಡನ ಕತ್ತಿನಲ್ಲಿದ್ದ ಅಮೂಲ್ಯವಾದ ರತ್ನಾಭರಣವು ಇಲ್ಲದಿರುವುದನ್ನು ಕಂಡು "ಏನಾಯಿತು?" ಎಂದು ಕೇಳಿದಳು. ಆತನು ವಿದುರ ಪಂಡಿತನ ವೃತ್ತಾಂತವನ್ನೆಲ್ಲ ಹೇಳಿ, ತಾನು ಆತನಿಗೆ ಅದನ್ನು ಕಾಣಿಕೆಯಾಗಿ ಕೊಟ್ಟೆನೆಂದು ಹೇಳಿದನು. ತನ್ನ ಗಂಡನು ಒಪ್ಪಿದಂತಹ ಆ ಪದಾರ್ಥಂಸನನ್ನು ತಾನೂ ನೋಡಬೇಕು, ಆತನ ಉಪದೇಶವನ್ನು ತಾನೂ ಕೇಳಬೇಕು, ಎನ್ನಿಸಿತು. ಆತನಿರುವೆಡೆಗೆ ತಾವು ಹೋಗುವುದೇ? ತಾನಿರುವೆಡೆಗೆ ಆತನನ್ನೇ ಬರಮಾಡಿಕೊಳ್ಳುವುದೇ? ಎಂದು ಯೋಚಿಸಿದಳು. ಕೊನೆಗೆ ಆತನನ್ನೇ ತನ್ನ ಲೋಕಕ್ಕೆ ಉಪಾಯವಾಗಿ ಬರಮಾಡಿಕೊಳ್ಳಬೇಕು ಎನ್ನಿಸಿ, ತನಗೆ ಮನೋ ಕೆಟ್ಟ ರೋಗವು ಬಂದಿರುವುದಾಗಿಯೂ ಆ ವಿದುರ ಪಂಡಿತನ ಎದೆಯ ಮಾಂಸವನ್ನು ತಂದುಕೊಟ್ಟಲ್ಲದೆ ಅದು ಗುಣವಾಗುವುದಿಲ್ಲವಾಗಿಯೂ ಹೇಳಿ ಹಾಸಿಗೆ ಹಿಡಿದು ಮಲಗಿದಳು.

ವರುಣನಿಗೆ ಬಹು ಕಷ್ಟಕ್ಕೆ ಬಂದಿತು. ಏನುಮಾಡುವುದಕ್ಕೂ ತೋರದೆ ಚಿಂತಾಗ್ರಸ್ತನಾದನು. ಆತನ ಮಗಳು ಇರಾವತಿಯು ಬಂದು ತಂದೆಯ ಚಿಂತೆಯನ್ನು ವಿಚಾರಿಸಿ ಆ ಚಿಂತೆಯ ನಿವಾರಣೆಗೆ ತಾನೂ ಸಹಾಯಮಾಡುವುದಾಗಿ ಹೇಳಿದಳು. ಆಕೆಯು ತಾಯಿ ತಂದೆಗಳನ್ನು ಒಪ್ಪಿಸಿ ಕಾರ್ಯಸಾಧನೆಗೆ ಹೊರಟಳು.

ಆಕೆಯು ಹಿಮಾಲಯದ ಶಿಖರಕ್ಕೆ ಬಂದು ಅಲ್ಲೊಂದು ಮಂಚವನ್ನು ಹಾಕಿಸಿದಳು. ತಾನು ಮನೋಹರವಾಗಿ ಸಿಂಗರಿಸಿಕೊಂಡು ಅಲ್ಲಿ ಕುಳಿತು "ಯಕ್ಷರಕ್ಷಸ್ಸುಗಳಲ್ಲಿ ಆಗಲಿ ದೇವಗಂಧರ್ವರಲ್ಲಿ ಆಗಲಿ, ನನ್ನನ್ನು ಮದುವೆಯಾಗಬೇಕೆನ್ನುವವರು ಬನ್ನಿ. ನನ್ನ ತಂದೆಯ ದುಃಖವನ್ನು ನಿವಾರಿಸಬಲ್ಲ ಧೀರನನ್ನು ನಾನು ಮದುವೆಯಾಗತಕ್ಕವಳು" ಎಂದು ತನ್ನ

ದಾಸಿಯ ಕಡೆಯಿಂದ ಕೂಗಿಸಿದಳು.

ಪುಣ್ಯೋದನೆಂಬ ಯಕ್ಷನಾಥನು ಅತ್ತಕಡೆ ಹೋಗುತ್ತಿದ್ದವನು ಆ ಘೋಷಣವನ್ನು ಕೇಳಿ ಅತ್ತ ಬಂದನು. ಇರಾವತಿಯ ರೂಪಲಾವಣ್ಯಗಳಿಗೆ ಸೋತು, ತಾನು ಅವಳನ್ನು ಆಕೆಯ ನಿಬಂಧನೆಗೊಳಪಟ್ಟು ಮದುವೆಯಾಗಲು ಒಪ್ಪಿಕೊಂಡನು. ಇರಾವತಿಯು ಅವನನ್ನು ತಂದೆಯ ಬಳಿಗೆ ಕರೆದುಕೊಂಡು ಹೋದಳು. ಅಲ್ಲಿ ವರುಣನು ಎಲ್ಲವನ್ನೂ ವಿಸ್ತಾರವಾಗಿ ಹೇಳಿದನು.

ಪುಣ್ಯೋದನು ಒಪ್ಪಿದನು. ತನ್ನ ಊರಿಗೆ ಹೋಗಿ ತಮ್ಮರಸನಾದ ಕುಬೇರನ ಅಪ್ಪಣೆಯನ್ನು ಪಡೆದು, ಧನಂಜಯನ ಬಳಿಗೆ ಬಂದನು. ಧನಂಜಯನಿಗೆ ಪಗಡೆಯಲ್ಲಿ ಬಹಳ ಹುಚ್ಚು. ಯಕ್ಷನು ಈ ಗುಟ್ಟರಿತು ತಾನು ತಂದಿದ್ದ ಉತ್ತಮಾಶ್ವವನ್ನು ತೋರಿಸಿ "ಅರಸೇ! ನಿನ್ನ ರಾಜ್ಯವೆಲ್ಲವನ್ನೂ ಕೊಟ್ಟರೂ ಈ ಕುದುರೆಯ ಬೆಲೆಯಾಗುವುದಿಲ್ಲ. ಸ್ವರ್ಗದಲ್ಲಿಯೂ ಇಂತಹ ಕುದುರೆಯಿಲ್ಲ. ಇದನ್ನು ಪಣವಾಗಿ ಒಡ್ಡುವೆನು. ಪಗಡೆ ಆಡುವೆಯಾ?" ಎಂದನು.

ಧನಂಜಯನಿಗೆ ಕುದುರೆಯನ್ನು ಕಂಡು ಆಸೆಯಾಯಿತು. ಆ ಕುದುರೆಯೋ ಗಾಳಿಗಿಂತ ಚುರುಕಾಗಿ, ಮಿಂಚಿಗಿಂತಲೂ ಮಿಂಚಿ, ಒಂದೇ ಗಳಿಗೆಯೊಳಗಾಗಿ ಲೋಕವನ್ನೆಲ್ಲ ಸುತ್ತಿ ಬರಬಲ್ಲುದು. ಅದನ್ನು ಕಂಡು ಆಸೆಪಟ್ಟು ಅರಸನು ಯಕ್ಷನೊಡನೆ ಆಡುವುದಕ್ಕೆ ಕುಳಿತನು.

ಏನುಮಾಡಿದರೂ ಧನಂಜಯನು ಗೆಲ್ಲುವುದಕ್ಕೆ ಆಗಲಿಲ್ಲ. ಧನಂಜಯನು ದಾಳವು ಉರುಳುತ್ತಿದ್ದ ಹಾಗೆಯೆ ಯಾವ ಗರವು ಬೀಳುವುದು ಎಂದು ತಿಳಿಯಬಲ್ಲವನು. ಮೂರುಸಲ ಉರುಳುತ್ತಿದ್ದ ದಾಳವನ್ನು ತಡೆದನು. ಆದರೂ ಫಲವಾಗದೆ ಸೋತನು. ಯಕ್ಷನು ಕೇಳಿದ ಗರವೆಲ್ಲ ಬೀಳುವುದು. ಧನಂಜಯನಿಗೆ ಒಂದು ಗರವೂ ಬೀಳದು. ಹೀಗಾಗಿ ಧನಂಜಯನು ಸೋತನು.

ಯಕ್ಷನು ಧನಂಜಯನನ್ನು ಕುರಿತು " ಈಗ ನೀನು ಸೋತೆಯಾಗಿ

ನಿನ್ನ ಸರ್ವಸ್ವವೂ ನನ್ನದು. ನೀನು ವಿದುರ ಪಂಡಿತನನ್ನು ನನಗೆ ಕೊಟ್ಟರೆ ನಾನು ಈ ಎಲ್ಲವನ್ನೂ ನಿನಗೇ ಕೊಡುವೆನು" ಎಂದನು. ಧನಂಜಯನಿಗೆ ವಿದುರ ಪಂಡಿತನನ್ನು ಕೊಡಲು ಇಷ್ಟವಿಲ್ಲದೆ, "ಆತನು ಸ್ವತಂತ್ರನು, ಆತನ ಮೇಲೆ ನನ್ನ ಅಧಿಕಾರವಿಲ್ಲ" ಎಂದನು. ಕೊನೆಗೆ ಇಬ್ಬರೂ ಹೋಗಿ ಆತನನ್ನೇ ಕೇಳಿದರು. ವಿದುರ ಪಂಡಿತನು "ನಾನು ಅರಸನಿಗೆ ಸೇರಿದವನು, ಅವನ ಉಪ್ಪು ತಿಂದು ಬೆಳೆದವನು ನಾನು. ನನ್ನನ್ನು ಅರಸನೇನುಬೇಕಾದರೂ ಮಾಡಬಹುದು" ಎಂದನು.

ಅರಸನು ಅದನ್ನು ಕೇಳಿ ಬಹಳ ಗೋಳಾಡಿದನು. ಆತನನ್ನು ಉಳಿಸಿಕೊಳ್ಳಲು ಅರಸನೇನೇನೋ ಪ್ರಯತ್ನ ಮಾಡಿದರೂ ಫಲವಾಗದೆ ಹೋಯಿತು. ಕೊನೆಗೆ ಪಂಡಿತನನ್ನು ಯಕ್ಷನ ವಶಕ್ಕೆ ಒಪ್ಪಿಸಿದನು. ಪಂಡಿತನು ಮೂರುದಿನದ ವಾಯಿದೆಯನ್ನು ಕೇಳಿಕೊಂಡು ಯಕ್ಷನನ್ನೂ ಮನೆಗೆ ಕರೆದುಕೊಂಡು ಹೋದನು. ಮೂರುದಿನವೂ ಮಕ್ಕಳುಮರಿಗೆಲ್ಲ ಧರ್ಮೋಪದೇಶ ಮಾಡಿ ನಾಲ್ಕನೆಯ ದಿನ ಬೆಳಕು ಹರಿಯುತ್ತಿದ್ದಹಾಗೆಯೇ ಯಕ್ಷನೊಡನೆ ಹೊರಟನು.

ಯಕ್ಷನು ವಿದುರ ಪಂಡಿತನನ್ನು ಮೇರುಪರ್ವತದ ಶಿಖರಕ್ಕೆ ಕರೆದುಕೊಂಡು ಹೋಗಿ ಅಲ್ಲಿ ಅವನನ್ನು ಕೊಲ್ಲಲು ಏನೇನೋ ಮಾಡಿದನು. ಸಿಡಿಲಾಗಿ ಬಡಿದನು. ಸಿಂಹವಾಗಿ ಕಚ್ಚಿದನು. ಆನೆಯಾಗಿ ತಿವಿದನು. ಹಕ್ಕಿಯಾಗಿ ಬಂದು ಅವನನ್ನು ಎತ್ತಿಕೊಂಡು ಹೋಗಿ ಆಕಾಶದಿಂದ ಎತ್ತಿ ಹಾಕಿದನು. ಏನು ಮಾಡಿದರೂ ವಿದುರ ಪಂಡಿತನು ಸಾಯಲಿಲ್ಲ, ಮರು ಮಾತನಾಡಲಿಲ್ಲ, ಹೆದರಲಿಲ್ಲ. ಕೊನೆಗೆ ಯಕ್ಷನು ಬೇಸತ್ತು ತಾನೇ ಬಂದು ಎದುರಿಗೆ ನಿಂತು, "ವಿದುರ ಪಂಡಿತಾ! ಏನು ಮಾಡಿದರೆ ನೀನು ಸಾಯುವೆ?" ಎಂದನು. ಪಂಡಿತನು "ಸಾವು ಹುಟ್ಟುಗಳು ನಮ್ಮ ಕೈಯಲ್ಲಿಲ್ಲ. ಆದರೆ ನನ್ನನ್ನು ಸಾಯಿಸುವ ಮೊದಲು ನನ್ನ ಎರಡು ಮಾತು ಕೇಳಿ, ಅನಂತರ ನಿನಗೆ ತೋರಿದಹಾಗೆ ಮಾಡಿಕೋ" ಎಂದನು.

ಯಕ್ಷನು ಆಗಲಿ ಎಂದು ಮಿಂದು ಮಡಿಯುಟ್ಟು ಬಂದು ಕುಳಿತನು. ವಿದುರ ಪಂಡಿತನೂ ಉಪದೇಶಕ್ಕೆ ಕುಳಿತನು. ಆಕಾಶದಲ್ಲಿ ತಿರುಗುತ್ತಿದ್ದ ದೇವಾದಿಗಳೆಲ್ಲರೂ ಬಂದು ನೆರೆದರು. ಪಂಡಿತನು "ಆಸರೆಯಾಗಿದ್ದ ಮರವನ್ನು ಕಡಿಯಬಾರದು. ಹಾವಿನಂತಹ ಹೆಣ್ಣಿಗೆ ಆಸೆಬಿದ್ದು ಕೊಲೆ ಮಾಡಬಾರದು. ಭೋಗಕ್ಕಾಗಿ ಎಲ್ಲವನ್ನೂ ಬಲಿಗೊಡಬಾರದು" ಎಂದು ಉಪದೇಶವನ್ನು ಮಾಡಿದನು.

ಆ ಉಪದೇಶವನ್ನು ಕೇಳಿದ ಹಾಗೆಲ್ಲ ಯಕ್ಷನಿಗೆ ತಳಮಳವಾಯಿತು. "ವಿದುರ ಪಂಡಿತನು ಬುದ್ಧಿವಂತ. ಎಲ್ಲವನ್ನೂ ತನಗೇ ಹೊಂದುತ್ತಿರುವಂತೆ ಹೇಳುತ್ತಿರುವನು. ನಾನು ಹಸ್ತಿನಾವತಿಗೆ ಹೋಗಿದ್ದಾಗ ಅಲ್ಲಿ ನನಗೆ ಯಾರೂ ಇರಲಿಲ್ಲ. ಆದರೂ ಕರೆದು ಮೂರುದಿನ ಮನೆಯಲ್ಲಿ ಇಟ್ಟುಕೊಂಡಿದ್ದನು. ಆಸರೆ ಕೊಟ್ಟ ಮರವೆನ್ನುವುದು ತನ್ನನ್ನೇ! ತನ್ನನ್ನು ಕೊಲ್ಲಬಾರದು ಎನ್ನುತ್ತಾನೆ. ಹಾವಿನಂತಹ ಹೆಣ್ಣಿಗೆ ಆಸೆಬಿದ್ದು ಕೊಲೆಗಡಿಕನಾಗಬಾರದು ಎನ್ನುವನು, ನಿಜ. ಇರಾವತಿಯು ನಾಗಸ್ತ್ರೀ! ಅವಳಿಗಾಗಿಯೇ ನಾನು ಇವನನ್ನು ವಧಿಸಬೇಕೆಂದಿರುವುದು. ಭೋಗಕ್ಕಾಗಿ ಎಲ್ಲವನ್ನೂ ಬಲಿಗೊಡಬಾರದು ಎನ್ನುವನು. ನಾನು ಈಗ ಮಾಡುತ್ತಿರುವುದು ಇನ್ನೇನು?" ಎಂದು ಎಲ್ಲವನ್ನೂ ಚಿಂತಿಸಿದನು. ಕೊನೆಗೆ "ಹೆಣ್ಣಿಗೋಸ್ಕರ ತಾನೇಕೆ ಈ ಪಂಡಿತನನ್ನು ಕೊಲ್ಲಬೇಕು? ಬೇಕಾದರೆ ಅವಳೇ ಕೊಂದು ಆ ಪಾಪವನ್ನು ಕಟ್ಟಿಕೊಳ್ಳಲಿ" ಎನ್ನಿಸಿ ವಿದುರ ಪಂಡಿತನನ್ನು ಕರೆದುಕೊಂಡು ವರುಣಲೋಕಕ್ಕೆ ಹೋದನು.

ಅಲ್ಲಿ ವರುಣನು ಪಂಡಿತನಿಗೆ ಬೇಕಾದಹಾಗೆ ಪೂಜೆ ಮಾಡಿದನು. ಆತನು ಬಂದನೆಂದು ಕೇಳಿ ವಿಮಲೆಯು ಎದ್ದು ಓಡೋಡಿ ಬಂದಳು. ಮಗಳನ್ನು ಕರೆದು "ಅದೃಷ್ಟ! ನಿನ್ನ ಗಂಡನು ಅವನನ್ನು ಕೊಲ್ಲಲಿಲ್ಲ, ಆತನ ಉಪದೇಶವನ್ನು ಕೇಳಬೇಕು ಎಂದು ನನಗೆ ಆಸೆಯಾಯಿತು. ಆದರೆ ಆತನಿರುವ ಎಡೆಗೆ ಹೋಗಿ ಕೇಳುವುದಕ್ಕಿಂತ ನಾನಿರುವ ಕಡೆಗೇ ಆತನನ್ನು

ಕರೆಸಿಕೊಳ್ಳಬೇಕೆಂದು ಹೀಗೆ ಉಪಾಯ ಮಾಡಿದೆನು" ಎಂದು ಹೇಳಿ, ಪಂಡಿತನನ್ನು ಕರೆದುತಂದ ಯಕ್ಷನನ್ನು ಬೇಕಾದಹಾಗೆ ಗೌರವಿಸಿದಳು.

ವಿದುರ ಪಂಡಿತನನ್ನು ವರುಣನೂ ವರುಣನ ಹೆಂಡತಿಯೂ ಒಂದು ತಿಂಗಳುಕಾಲ ತಮ್ಮ ಅರಮನೆಯಲ್ಲಿ ಇಟ್ಟುಕೊಂಡಿದ್ದರು. ದಿನದಿನವೂ ಅವರಿಬ್ಬರೂ ಅವನಿಗೆ ಆಳುಗಳಂತೆ ಸೇವೆ ಮಾಡುವರು. ಒಪ್ಪೊತ್ತಿನಲ್ಲಿ ಶಿಷ್ಯರಿಗಿಂತ ಹೆಚ್ಚಾಗಿ ಆತನ ಪಾದಮೂಲದಲ್ಲಿ ಕುಳಿತು ಆತನ ಉಪದೇಶ ವೆಂಬ ಅಮೃತವನ್ನು ಮನವಾರೆ ಪಾನಮಾಡುವರು. ಆ ಉಪದೇಶವನ್ನು ಕೇಳಲು ನಾಗಲೋಕದವರೆಲ್ಲ ಬರುವರು.

ಕೊನೆಗೆ ವಿದುರ ಪಂಡಿತನ ಸಲಹೆಯಂತೆ ಅವರು ಮಗಳ ಮದುವೆ ಯನ್ನು ವೈಭವದಿಂದ ಮಾಡಿದರು. ಆ ಉತ್ಸವವೆಲ್ಲ ಮುಗಿದಮೇಲೆ ಪಂಡಿತ ನನ್ನು ಬೀಳ್ಕೊಟ್ಟರು. ಆತನಿಗೆ ಕಾಣಿಕೆಯೆಂದು ತಮ್ಮ ಐಶ್ವರ್ಯದಲ್ಲಿ ಅರ್ಧವನ್ನು ಒಪ್ಪಿಸಿದರು.

ವಿದುರ ಪಂಡಿತನು ತನ್ನ ಉಪದೇಶದಿಂದ ನಾಗಲೋಕವನ್ನೆಲ್ಲ ಉದ್ಧರಿಸಿ ಹಿಂತಿರುಗಿದನು. ಯಕ್ಷನು ಆತನನ್ನು ಕರೆದುಕೊಂಡು ಬಂದು ಹಸ್ತಿನಾವತಿಯ ಬಾಗಿಲಲ್ಲಿ ಇಳಿಸಿದನು.

ಪಂಡಿತನು ಹಿಂತಿರುಗಿ ಬಂದ ಸುದ್ದಿ ಒಂದೇ ಒಂದು ಗಳಿಗೆಯೊಳ ಗಾಗಿ ರಾಜಧಾನಿಯಲ್ಲಿ ಎಲ್ಲರಿಗೂ ತಿಳಿಯಿತು. ಆಳಿನಿಂದ ಅರಸನವರೆಗೂ ಎಲ್ಲರೂ ಬಂದು ಆತನನ್ನು ಆನಂದವಾಗಿ ಪೂಜಿಸಿ ಊರಿನೊಳಕ್ಕೆ ಕರೆದು ಕೊಂಡು ಹೋದರು.

---

# ಮೂರು ಪ್ರಶ್ನೆಗಳು

'ಅರೇಬಿಯದಲ್ಲಿ ಒಬ್ಬ ದೊರೆಯು ಆಳುತ್ತಿದ್ದನು. ಅವನ ಆಶ್ರಯದಲ್ಲಿ ಅನೇಕಾನೇಕ ವಿದ್ವಾಂಸರು ಸುಖವಾಗಿದ್ದರು.

ಒಂದು ದಿನ ಅವನಿಗೆ ಒಂದು ಯೋಚನೆ ಬಂತು: "ದೇವರ ಮುಖ ಯಾವ ಕಡೆಗೆ ಇದೆ? ಅವನು ಏನು ಮಾಡುತ್ತಿದ್ದಾನೆ? ಈ ಜಗತ್ತಿನ ಆಚೆ ಏನಿದೆ?' ಎನ್ನಿಸಿತು. ಅವನು ಎಷ್ಟು ಯೋಚನೆ ಮಾಡಿದರೂ ಅರ್ಥವಾಗ ಲಿಲ್ಲ. ಕೊನೆಗೆ ತನ್ನ ವಿದ್ವಾಂಸರನ್ನೆಲ್ಲ ಕರೆಸಿ ಈ ಮೂರು ಪ್ರಶ್ನೆಗಳನ್ನು ಕೇಳಿದನು.

ಆ ವಿದ್ವಾಂಸರಲ್ಲಿ ಯಾರೂ ಅದುವರೆಗೂ ಇಂತಹ ಪ್ರಶ್ನೆಗಳನ್ನು ಕೇಳಿಯೇ ಇರಲಿಲ್ಲ. ಅವರು ಬೇಕಾದಷ್ಟು ಯೋಚಿಸಿದರು. ತಮ್ಮಲ್ಲಿದ್ದ ಪುಸ್ತಕಗಳನ್ನೆಲ್ಲ ಮೊಗಚಿದರು. ಕಂಡವರನ್ನೆಲ್ಲ ಕೇಳಿದರು. ಏನು ಮಾಡಿ ದರೂ ಎಷ್ಟು ಹೇಳಿದರೂ ಎಷ್ಟು ಕೇಳಿದರೂ ಅರಸನ ಪ್ರಶ್ನೆಗಳಿಗೆ ಉತ್ತರ ಬರಲಿಲ್ಲ.

ಅರಸನಿಗೆ ಕೋಪಬಂತು: "ಇತರರು ತಿಳಿಯದುದನ್ನೆಲ್ಲ ನೀವು ತಿಳಿದಿರು ವಿರಿ ಎಂದು ನಿಮ್ಮನ್ನು ನಾನು ಇಟ್ಟುಕೊಂಡಿದ್ದುದು. ನೀವು ನನ್ನ ಪ್ರಶ್ನೆಗಳಿಗೆ ಯಾವಾಗ ಉತ್ತರ ಕೊಡಲಿಲ್ಲವೋ ಆಗ ನೀವೂ ಇತರರಂತೆಯೇ ಆದಿರಿ. ನಿಮ್ಮನ್ನೇಕೆ ನಾವು ಇಟ್ಟುಕೊಂಡಿರಬೇಕು? ಇಷ್ಟು ದಿವಸವೂ ನೀವು ಮಾಡಿದ ಮೋಸಕ್ಕೆ ಈಗ ನಿಮಗೆ ಶಿಕ್ಷೆ ಮಾಡಬೇಕು. ಯಾಕೆ ಮಾಡ ಬಾರದು? ಹೇಳಿ" ಎಂದು ರೇಗಿ ಕೂಗಾಡಿದನು.

ವಿದ್ವಾಂಸರು ಯಾರೂ ಏನೂ ಹೇಳಲಿಲ್ಲ; ಕೊನೆಗೆ ಅವರಲ್ಲೆಲ್ಲ ಯೋಗ್ಯನು ತಪಸ್ವಿಯು ಎಂದೆನ್ನಿಸಿಕೊಂಡಿದ್ದ ವೃದ್ಧನೊಬ್ಬನು ಎದ್ದು "ಮಹಾಸ್ವಾಮಿಯವರು ಇಷ್ಟು ಕೋಪ ಮಾಡಬೇಕಾಗಿಲ್ಲ. ಹಲ್ಲು ಗಟ್ಟಿಯಾಗಿದೆಯೆಂದಮಾತ್ರಕ್ಕೆ ಕಲ್ಲು ಕಡಿಯಲಾದೀತೆ? ಇವು ನಮ್ಮ ಬುದ್ಧಿಗೆ ಮೀರಿದ ಪ್ರಶ್ನೆಗಳು. ಇಂತಹ ಪ್ರಶ್ನೆಗಳಿಗೆ ನಾವು ಉತ್ತರ ಕೊಡ ಲಿಲ್ಲ ಎಂದು ನಮ್ಮನ್ನು ಶಿಕ್ಷಿಸುವುದು ನ್ಯಾಯವಲ್ಲ. ಇದರಿಂದ ಪ್ರಶ್ನೆ ಹಾಕುವುದರಲ್ಲಿ ನಮಗಿಂತ ನೀವು ಬುದ್ಧಿವಂತರು ಎಂದಾಯಿತೇ ಹೊರತು, ನಾವು ಬುದ್ಧಿವಂತರಲ್ಲ, ವಿದ್ಯಾವಂತರಲ್ಲ, ಎಂದಾಗಲಿಲ್ಲ. ಈಗಲೂ ಮಹಾ

ಪ್ರಭುಗಳು ಮನಸ್ಸುಮಾಡಿ ಮೂರು ದಿನಗಳ ಅವಧಿಯನ್ನು ಕೊಡೋಣ ವಾಗಲಿ. ನಮ್ಮಲ್ಲಿ ಯಾರಾದರೂ ಒಬ್ಬರು ತಮ್ಮ ಪ್ರಶ್ನೆಗಳಿಗೆ ಸರಿಯಾದ ಉತ್ತರವನ್ನು ಹೇಳುವೆವು: ಇಲ್ಲದಿದ್ದರೆ, ಉತ್ತರ ಹೇಳುವವರನ್ನಾದರೂ ಕರೆದು ತರುವೆವು" ಎಂದು ಹೇಳಿ ಸಮಾಧಾನ ಮಾಡಿದನು.

ಮುದುಕನ ಮಾತು ದೊರೆಗೆ ಹಿಡಿಯಿತು. ಹಾಗೇ ಆಗಲಿ ಎಂದು ದೊರೆಯು ಮೂರು ದಿನಗಳ ಅವಧಿಯನ್ನು ಕೊಟ್ಟನು. ಮುದುಕನು "ದೇವರೇ! ಈ ಕೊನೆಗಾಲದಲ್ಲಿ ಇಂತಹ ತೊಂದರೆಯನ್ನು ತಂದಿಟ್ಟೆ ಯಲ್ಲ" ಎಂದು ಚಿಂತಿಸುತ್ತಾ, "ದೊರೆಯ ಕೈಯಲ್ಲಿ ಸಾಯುವುದಕ್ಕಿಂತ ನಾನೇ ಪ್ರಾಣಬಿಡುವುದು ಒಳ್ಳೆಯದು" ಎಂದು ಒಂದು ಚಾಪೆ ಹಾಸಿ ಕೊಂಡು ಉಪವಾಸ ಮಲಗಿಬಿಟ್ಟನು.

ಆ ಪಂಡಿತನಿಗೆ ಒಬ್ಬ ಮಗ. ಅವನಿಗೆ ಏಳೆಂಟುವರ್ಷ. ಅವನಿಗೆ ತಂದೆಯ ಮೇಲಣಭಿಮಾನ ಬಹಳ ಹೆಚ್ಚು. ಯಾರು ಬಂದು ಕೇಳಿದರೂ ದುಃಖವೇಕೆ ಎಂದು ಹೇಳದ ತಂದೆಯು ಆ ಮಗುವು ಬಂದು ಕೇಳುತ್ತಲೂ ಮಗನ ಮೇಲಿನ ಅಭಿಮಾನದಿಂದ ಹೇಳಿದನು.

ಆ ಹುಡುಗನು ಆ ಪ್ರಶ್ನೆಗಳನ್ನು ಕೇಳಿ ನಕ್ಕುಬಿಟ್ಟನು. "ಅಪ್ಪಾ, ಇಂತಹ ಹುಡುಗು ಪ್ರಶ್ನೆಗಳನ್ನು ಆ ದೊರೆಯು ನಿಮ್ಮಂತಹ ಮಹಾ ವಿದ್ವಾಂಸರನ್ನು ಕೇಳಬಹುದೆ? ಉಗುರು ತೆಗೆಯುವುದಕ್ಕೆ ಕೊಡಲಿಯನ್ನು ತಂದರೆ ಆದೀತೆ? ತಾವು ಹೋಗಿ ಹೇಳಿ, ಮೂರುದಿನದ ಗಡುವೂ ಬೇಡ ಏನೂ ಬೇಡ. ಈಗಲೇ ಬೇಕಾದರೆ ನಾನು ಉತ್ತರ ಕೊಡುತ್ತೇನೆ" ಎಂದನು.

ವಿದ್ವಾಂಸನಿಗೆ ಆಶ್ಚರ್ಯವಾಯಿತು. ಆದರೂ ಮಗನ ಬುದ್ಧಿವಂತಿಕೆ ಯನ್ನು ಬಲ್ಲವನಾದುದರಿಂದ ಒಪ್ಪಿಕೊಂಡು, ಎದ್ದು ಹೋಗಿ ದೊರೆ ಯನ್ನು ಕಂಡು "ಮಹಾಸ್ವಾಮಿ! ತಮ್ಮ ಪ್ರಶ್ನೆಗಳಿಗೆ ಉತ್ತರ ಕೊಡು ವಂತಹ ಬುದ್ಧಿವಂತನನ್ನು ಕಂಡುಹಿಡಿದಿದ್ದೇವೆ" ಎಂದನು.

ದೊರೆಗೆ ಆಶ್ಚರ್ಯವಾಗಿ, ಮರುದಿನವೇ ರಾಜಸಭೆಯನ್ನು ಸೇರಿಸಿ

ದನು. ಅರಸನ ಆಳುಗಳು ಆ ಹುಡುಗನನ್ನು ಬೇಕಾದ ಮರ್ಯಾದೆಯಿಂದ ಕರೆದುಕೊಂಡು ಬಂದರು.

ಹುಡುಗನು ಆಸ್ಥಾನಕ್ಕೆ ಬಂದನು. ಹಿರಿಯರಿಗೆಲ್ಲ ನಮಸ್ಕಾರ ಮಾಡಿ, ದೊರೆಯೆದುರಿಗೆ ದಿಟ್ಟವಾಗಿ ನಿಂತು, "ಅರಸಾ! ತಮ್ಮ ಪ್ರಶ್ನೆಗಳೇನು?" ಎಂದು ಕೇಳಿದನು. ಅರಸು ಪ್ರಶ್ನೆಗಳನ್ನು ಹೇಳಿದನು.

ಹುಡುಗನು ನಕ್ಕು "ಇವೆಯೇ ಆ ಮಹಾ ಪ್ರಶ್ನೆಗಳು! ಅರಸಾ! ಒಂದು ದೊಡ್ಡ ಕೊಂಡವನ್ನು ಮಾಡಿಸಿ" ಎಂದನು. ಅರಸನ ಅಪ್ಪಣೆಯಂತೆ ಆಳುಗಳು ಹತ್ತುಗಾಡಿ ಸೌದೆಯನ್ನು ಒಡ್ಡಿ ದೊಡ್ಡ ಕೊಂಡವನ್ನು ಮಾಡಿದರು. ಉರಿಯು ಧಗಧಗನೆ ಎಲ್ಲಕಡೆಗೂ ಎದ್ದಿತು.

ಹುಡುಗನು ಅರಸನನ್ನು ಕರೆದು, "ಪ್ರಭುವೆ! ಈ ಕೊಂಡವು ಯಾವ ಕಡೆಗೆ ತಿರುಗಿದೆ? ಎಂದು ಕೇಳಿದನು.. ಅರಸನು ಕಕ್ಕುಬಿಕ್ಕಾಗಿ "ಹಾಗೆಂದರೇನು! ಉರಿಯುತ್ತಿರುವ ಈ ಭಾರಿಯ ಕೊಂಡಕ್ಕೆ ಮುಖವೆಲ್ಲಿದೆ? ಎದುರಿಗೆ ಯಾರಿದ್ದರೆ ಅವರ ಕಡೆ ಮುಖ!" ಎಂದನು.

ಹುಡಗನು "ಹೌದು, ಹೌದು, ದೇವರೂ ಇದರಂತೆಯೆ! ಈ ಸಣ್ಣ ಬೆಂಕಿಗೇ ಒಂದು ಮುಖವಿಲ್ಲ: ಎಲ್ಲರ ಕಡೆಗೂ ಇದೆಯೆಂದರೆ, ಇಂತಹ ಬೆಂಕಿಗಳನ್ನೆಲ್ಲ ಉರಿಸುವ ಬೆಂಕಿಯಾದ ಆತನಿಗೆ ಇನ್ನೆಷ್ಟು ಮುಖವಿರಬೇಕು! ದೇವರು ಯಾವ ದಿಕ್ಕಿನ ಕಡೆಗೂ ತಿರುಗಿಲ್ಲ; ತನ್ನನ್ನು ಆರಾಧಿಸುವವರ ಕಡೆಗೆ ತಿರುಗಿದ್ದಾನೆ" ಎಂದನು.

ಹುಡುಗನ ಉತ್ತರವನ್ನು ಎಲ್ಲರೂ ಮೆಚ್ಚಿಕೊಂಡರು. ಅರಸ ಸಂತೊಸ ಹುಡುಗನನ್ನು ಎತ್ತಿಕೊಂಡು ಮುದ್ದಾಡಿದನು: "ಮಗುವೇ! ಎರಡನೆಯ ಪ್ರಶ್ನೆಗೆ ಉತ್ತರವನ್ನು ಹೇಳುವೆಯಾ?" ಎಂದನು. ಹುಡುಗನು "ಆಗಲಿ" ಎಂದನು.

"ದೇವರು ಏನು ಮಾಡುತ್ತಿದ್ದಾನೆ?" ಎಂಬುದು ಎರಡನೆಯ ಪ್ರಶ್ನೆ! ಹುಡುಗನು ಅರಸನನ್ನು ಕರೆದು ಅವನ ಆಳು ಇರುವಕಡೆ ನಿಲ್ಲಿಸಿ

ದನು. ಆಳನ್ನು ಸಿಂಹಾಸನದ ಬಳಿಗೆ ಕರೆದುಕೊಂಡು ಹೋಗಿ ನಿಲ್ಲಿಸಿದನು. "ಅರಸಾ! ದೇವರು ಮಾಡುತ್ತಿರುವುದೇ ಇದು. ದೊಡ್ಡದನ್ನು ಚಿಕ್ಕದು ಮಾಡುತ್ತಿದ್ದಾನೆ. ಚಿಕ್ಕದನ್ನು ದೊಡ್ಡದು ಮಾಡುತ್ತಿದ್ದಾನೆ. ಅರಸನನ್ನು ಆಳುಮಾಡಿ, ಆಳನ್ನು ಅರಸುಮಾಡುತ್ತಿದ್ದಾನೆ" ಎಂದನು.

ಎರಡನೆಯ ಪ್ರಶ್ನೆಯೂ ಅರಸನ ಮನಸ್ಸಿಗೆ ಹಿಡಿಯಿತು. "ಅಬ್ಬಾ! ಎಂತಹ ಅದ್ಭುತದ ಬುದ್ಧಿಯಿದು!" ಎಂದು ಆಶ್ಚರ್ಯಪಟ್ಟು "ಮಗುವೇ! ಮೂರನೆಯ ಪ್ರಶ್ನೆಯನ್ನೂ ಹೇಳು. ನಿನಗೆ ಅರ್ಧರಾಜ್ಯ ಕೊಡುವೆನು" ಎಂದನು.

"ಜಗತ್ತಿನ ಆಚೆ ಏನಿದೆ?" ಎಂಬುದು ಮೂರನೆಯ ಪ್ರಶ್ನೆ. ಹುಡುಗನು ಅರಸನನ್ನು ಒಂದು ಗೋಡೆಯ ಮುಂದೆ ನಿಲ್ಲಿಸಿ, 'ಈ ಗೋಡೆ ಯಾಚೆ ಏನಿದೆ ಹೇಳಿ?' ಎಂದನು. ಅರಸನಿಗೆ ಏನೂ ತೋರಲಿಲ್ಲ. 'ಏನಿದೆಯೋ ಗೊತ್ತಿಲ್ಲ!' ಎಂದನು. "ಹೋಗಲಿ. ಒಂದರ ಹಿಂದೆ ಏನಿದೆ?" ಎಂದು ಕೇಳಿದನು.

ದೊರೆಗೆ ಅದೂ ತಿಳಿಯಲಿಲ್ಲ. "ನಾವು ಲೆಕ್ಕವನ್ನು ಆರಂಭಿಸುವುದೇ ಒಂದರಿಂದ! ಒಂದಾದಮೇಲೆ ಎರಡು ಎನ್ನಬಹುದು. ಒಂದರ ಹಿಂದೆ ಏನಿದೆ?" ಎಂದು ಎಷ್ಟೋ ಯೋಚಿಸಿ, "ತಿಳಿಯಲಿಲ್ಲಪ್ಪ!" ಎಂದನು.

"ಅರಸಾ! ನಮ್ಮ ಕಣ್ಣು ಗೋಡೆಯಿಂದಾಚೆಗೆ ಹಾಯದು. ಅದರಂತೆಯೇ ನಮ್ಮ ಬುದ್ಧಿಯೂ ಒಂದರಿಂದ ಹಿಂದಕ್ಕೆ ಹೋಗಲಾರದು. ಒಂದು ಎಂಬುದೇ ದೇವರು. ಅದೇ ಜಗತ್ತು. ಅಲ್ಲಿಂದಾಚೆಗೆ ಏನಿದೆಯೋ ಯಾರು ಬಲ್ಲರು? ಯಾರೂ ಕಾಣರು" ಎಂದನು.

ಹುಡುಗನ ಉತ್ತರಗಳನ್ನು ಕೇಳಿ ಅರಸನಿಗೆ ಬಹಳ ಸಂತೋಷವಾಯಿತು. ತಾನು ಮೊದಲು ಹೇಳಿದ್ದಂತೆಯೇ ಅವನಿಗೆ ಅರ್ಧ ರಾಜ್ಯವನ್ನು ಕೊಟ್ಟನು.

---

॥ ॥

# ದೇವುಡು ಬರೆದ ಇತರ ಪುಸ್ತಕಗಳು

---

**ಕಥೆಗಳು—**

| | | | |
|---|---|---|---|
| ಕಳ್ಳರ ಕೂಟ ... | ೦ | ೪ | ೦ |
| ದೇವುಡು ಕಥೆಗಳು | ೦ | ೮ | ೦ |
| ಸೋಲೋ ಗೆಲುವೋ | ೦ | ೧೨ | ೦ |
| ಅಂತರಂಗ .... | ೦ | ೧೨ | ೦ |
| ಮಯೂರ .... | ೧ | ೦ | ೦ |

**ನಾಟಕಗಳು—**

| | | | |
|---|---|---|---|
| ವಿಚಿತ್ರಶಿಕ್ಷೆ .... | ೦ | ೩ | ೦ |
| ಯೇಸು .... | ೦ | ೪ | ೦ |
| ಸಾವಿತ್ರಿ .... | ೦ | ೮ | ೦ |
| ವಿಚಾರಣೆ .... | ೧ | ೦ | ೦ |

**ಶಾಸ್ತ್ರ ಗ್ರಂಥಗಳು—**

| | | | |
|---|---|---|---|
| ಕರ್ಣಾಟಕ ಸಂಸ್ಕೃತಿ .... | ೧ | ೮ | ೦ |
| ಮೀಮಾಂಸಾದರ್ಪಣ | ೧ | ೮ | ೦ |
| ದಿವ್ಯವಾಣಿ .... | ೧ | ೮ | ೦ |

**ಇತರ ಗ್ರಂಥಗಳು—**

ರಾಮಾಯಣದ ಮಹಾಪುರುಷರು ೧

**ಕುಮಾರ ಸಾಹಿತ್ಯ—**

ಕಾಳಿದಾಸ

ಮಿಲ್ಟನ್

ಷೇಕ್ಸ್‌ಪಿಯರ್

**ಮಕ್ಕಳ ಕಥೆಗಳು—**

| | | | |
|---|---|---|---|
| ಬುದ್ಧಿಯ ಕಥೆಗಳು I .... | ೦ | ೪ | ೦ |
| II .... | ೦ | ೬ | ೦ |
| ಗಣೇಶನ ಕಥೆ .... | ೦ | ೧ | ೦ |
| ಅಪಾಯ-ಉಪಾಯ | ೦ | ೧ | ೦ |
| ಮಂಗಪ್ಪಾಜ ಪುರಾಣ | ೦ | ೧ | ೦ |

ಇತ್ಯಾದಿ. ಇತ್ಯಾದಿ.

ಮೋದಿ ಪವರ್ ಪ್ರಿಂಟಿಂಗ್ ವರ್ಕ್ಸ್, ಶ್ರೀ ನರಸಿಂಹರಾಜ ರೋಡ್, ಬೆಂಗಳೂರು ಸಿ